CPMG / KA / BG-GPO/13/2003-2005



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೦ | ಬೆಂಗಳೂರು, ಗುರುವಾರ, ಮೇ ೨೬, ೨೦೦೫ (ಜೇಷ್ಠ ೫, ಶಕ ವರ್ಷ ೧೯೨೭) | ಸಂಚಿಕೆ ೨೧ |
| --- | --- | --- |

## ಭಾಗ - ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾಗಿ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ

**ವಿಷಯ:** 2004-05ನೇ ಸಾಲಿನಲ್ಲಿ ಸಣ್ಣ ಕೈಗಾರಿಕಾ ಘಟಕಗಳಿಗೆ ಕೈಗಾರಿಕಾ ನೀತಿಯಡಿಯಲ್ಲಿ ಮಂಜೂರು ಮಾಡಲ್ಪಟ್ಟ ಬಂಡವಾಳ ಹೂಡಿಕೆ ಸಹಾಯಧನ ಬಾಕಿ ಘಟಕಗಳಿಗೆ ಬಿಡುಗಡೆ ಮಾಡುವ ಬಗ್ಗೆ.

**ಉಲ್ಲೇಖ:** ದಿನಾಂಕ: 14.3.2005ರ ಸರ್ಕಾರದ ಆದೇಶ ಸಂಖ್ಯೆ: ಸಿಐ 51 ಎಸ್‌ಪಿಸಿ 2005.

**ಪ್ರಸ್ತಾವನೆ:**

ಸಣ್ಣ ಮತ್ತು ಅತಿ ಸಣ್ಣ ಕೈಗಾರಿಕಾ ಘಟಕಗಳ ಯೋಜನೆಗೆ ಹೂಡಿದ ಒಟ್ಟು ಸ್ಥಿರ ಬಂಡವಾಳದ ಮೇಲೆ ಮಂಜೂರಾದ ಸಹಾಯಧನವನ್ನು ಬಿಡುಗಡೆ ಮಾಡಲು 2004-05ನೇ ಸಾಲಿನಲ್ಲಿ ನೀಡಿರುವ ಹೆಚ್ಚುವರಿ ಪೂರಕ ಅಂದಾಜು-2 ಮೊತ್ತದಲ್ಲಿ ಲೆಕ್ಕಶೀರ್ಷಿಕೆ 2851-00-102-0-69 (ಯೋಜನೇತರ) 106 ಸಣ್ಣ ಕೈಗಾರಿಕಾ ಘಟಕಗಳಿಗೆ ನೀಡಬೇಕಾದ ಬಂಡವಾಳ ಸಹಾಯಧನದ ಅಡಿಯಲ್ಲಿ ಮಂಜೂರಾದ ಘಟಕಗಳಿಗೆ ಬಿಡುಗಡೆ ಮಾಡುವುದಕ್ಕೆ ಸಂಬಂಧಿಸಿದಂತೆ ರೂ.65.00 ಕೋಟಿಗಳನ್ನು ಬಿಡುಗಡೆ ಮಾಡಲು ಉಲ್ಲೇಖದ ಆದೇಶದಲ್ಲಿ ಮಂಜೂರಾತಿ ನೀಡಲಾಗಿದೆ. ಅದರಲ್ಲಿ ದಿನಾಂಕ: 1.4.2003 ರಿಂದ 31.3.2004 ರವರೆಗೆ ಸಹಾಯಧನ ಮಂಜೂರಾದ ಘಟಕಗಳಿಗೆ ಶೇ.50 ರಷ್ಟು ಸಹಾಯಧನ ರೂ.8.00 ಕೋಟಿ ಬಿಡುಗಡೆ ಮಾಡಲು ತೀರ್ಮಾನಿಸಿ ಈ ಮುಂದಿನಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಐ 51 ಎಸ್‌ಪಿಸಿ 2005, ಬೆಂಗಳೂರು, ದಿನಾಂಕ: 31ನೇ ಮಾರ್ಚ್ 2005**

ಸಣ್ಣ ಮತ್ತು ಅತಿ ಸಣ್ಣ ಕೈಗಾರಿಕಾ ಘಟಕಗಳ ಯೋಜನೆಗೆ ಹೂಡಿದ ಒಟ್ಟು ಸ್ಥಿರ ಬಂಡವಾಳದ ಮೇಲೆ ಮಂಜೂರಾದ ಸಹಾಯಧನವನ್ನು ಬಿಡುಗಡೆ ಮಾಡಲು ಮಂಜೂರಾತಿ ನೀಡಿರುವ ರೂ.65.00 ಕೋಟಿಗಳಲ್ಲಿ ದಿನಾಂಕ: 1.4.2003 ರಿಂದ 31.3.2004 ರವರೆಗೆ ಸಹಾಯಧನ ಮಂಜೂರಾದ 852 ಘಟಕಗಳಿಗೆ (ಕೋಳಿ ಸಾಗಾಣಿಕೆ, ಇಟ್ಟಿಗೆ ಮತ್ತು ಸ್ವಂತ ಬಂಡವಾಳ ಹೂಡಿಕೆ ಘಟಕಗಳನ್ನು ಹೊರತುಪಡಿಸಿ) ರೂ.8.00 ಕೋಟಿ (ಎಂಟು ಕೋಟಿ ರೂಪಾಯಿಗಳು ಮಾತ್ರ) ಶೇ.50 ರಷ್ಟು ಸಹಾಯಧನ ಬಿಡುಗಡೆ ಮಾಡಲು ಮಂಜೂರಾತಿ ನೀಡಲಾಗಿದೆ.

**ಮಂಜೂರಾದ ಸಹಾಯಧನವನ್ನು ಈ ಕೆಳಕಂಡ ಘಟಕಗಳಿಗೆ ಮಾತ್ರ ಬಿಡುಗಡೆ ಮಾಡುವುದು.**

1) ದಿನಾಂಕ: 1.4.2003ರ ನಂತರ ದಿನಾಂಕ: 31.03.2004 ರವರೆಗೂ ಒಟ್ಟು 852 ಘಟಕಗಳಿಗೆ ಸಹಾಯ ಧನ ಮಂಜೂರಾದ ಘಟಕಗಳಿಗೆ (ಕೋಳಿ ಸಾಗಾಣಿಕೆ, ಇಟ್ಟಿಗೆ ಮತ್ತು ಸ್ವಂತ ಬಂಡವಾಳ ಹೂಡಿಕೆ ಘಟಕಗಳನ್ನು ಹೊರತುಪಡಿಸಿ) ಶೇಕಡಾ 50 ರಷ್ಟು ಸಹಾಯಧನ ರೂ.8.00 ಕೋಟಿ ಬಿಡುಗಡೆ ಮಾಡುವುದು.

2) ಸರ್ಕಾರಿ ಆದೇಶ ಸಂಖ್ಯೆ: ಸಿಐ 241 ಎಸ್‌ಪಿಐ 2001, ದಿನಾಂಕ: 31.8.2004ರ ಮಾರ್ಗದರ್ಶಿಯಂತೆ ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯಲ್ಲಿ ರಚಿಸಿರುವ ಸಮಿತಿಯು ಸರ್ಕಾರಿ ಆದೇಶದಲ್ಲಿ ಸೂಚಿಸಿರುವ ವರ್ಗಗಳಿಗೆ ಎಲ್ಲಾ ಘಟಕಗಳ ಕಾರ್ಯನಿರ್ವಹಣೆ ಬಗ್ಗೆ ಜಂಟಿ ತಪಾಸಣೆ ನಡೆಸಿ, ತಪಾಸಣೆ ವರದಿಯ ಆಧಾರದ ಮೇಲೆ ಕಾರ್ಯನಿರತವಾದ ಘಟಕಗಳಿಗೆ ಜ್ಯೇಷ್ಠತೆ ಆಧಾರದ ಮೇಲೆ ದಿನಾಂಕ: 30.4.2005 ರೊಳಗೆ ಸಹಾಯಧನ ಬಿಡುಗಡೆ ಮಾಡುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ.ಎಸ್. ಪಾರ್ವತಿ**

ಪಿ.ಆರ್. 531 — ಸರ್ಕಾರದ ಅಧೀನ ಕಾರ್ಯದರ್ಶಿ (ಸಪ್ರಕೈ), ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

## ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ

**ವಿಷಯ:** ದಿ ಮೈಸೂರು ಸಕ್ಕರೆ ಕಾರ್ಖಾನೆ ನಿಯಮಿತ ಇದರ ಪುನರುಜ್ಜೀವನಕ್ಕೆ ಆರ್ಥಿಕ ನೆರವು.

**ಓದಲಾಗಿದೆ:** ದಿನಾಂಕ: 17.3.2005 ರಂದು ಮಾನ್ಯ ಉಪ ಮುಖ್ಯಮಂತ್ರಿಗಳು ಹಾಗೂ ಹಣಕಾಸು ಸಚಿವರ ಅಧ್ಯಕ್ಷತೆಯಲ್ಲಿ ಮೈಸೂರು ಸಕ್ಕರೆ ಕಾರ್ಖಾನೆ ನಿ., ಮಂಡ್ಯ ಇದಕ್ಕೆ ಆರ್ಥಿಕ ಸಹಾಯ ಒದಗಿಸುವ ಬಗ್ಗೆ ಜರುಗಿದ ಸಭೆಯ ನಡವಳಿ.

**ಪ್ರಸ್ತಾವನೆ:**

ರಾಜ್ಯದ ಪ್ರಮುಖ ಕಬ್ಬು ಬೆಳೆಯ ಭಾಗವಾದ ಮಂಡ್ಯದಲ್ಲಿ ಸ್ಥಾಪನೆಗೊಂಡಿರುವ ಮೈಸೂರು ಸಕ್ಕರೆ ಕಾರ್ಖಾನೆಯು 7 ದಶಕಗಳಿಂದ ಕಾರ್ಯನಿರತವಾಗಿದೆ. 1994-95 ರಲ್ಲಿ ಕಂಪನಿಯು ರೂ.359.22 ಲಕ್ಷಗಳ ಲಾಭ ಪಡೆದು, ತದನಂತರ 1999-2000 ದವರೆಗೆ ಕಂಪನಿ ಚೆನ್ನಾಗಿಯೇ ಕಾರ್ಯನಿರ್ವಹಿಸಿತು. 2001-2002 (ರೂ.0.80 ಕೋಟಿ), 2002-03 (ರೂ.27.30 ಕೋಟಿ) ಮತ್ತು 2003-2004 (ರೂ.14.00 ಕೋಟಿ) ರಿಂದ ಮಾತ್ರ ಕಂಪನಿ ನಷ್ಟ ಅನುಭವಿಸಲು ಪ್ರಾರಂಭಿಸಿತು. ಕಳೆದ ಮೂರು ವರ್ಷಗಳ ಸತತ ಬರಗಾಲ ಎಸ್.ಎಂ.ಪಿ. ಗಿಂತ ಹೆಚ್ಚಿನ ಕಬ್ಬು ಬೆಲೆ ಪಾವತಿ ಮತ್ತು ಸಕ್ಕರೆಯ ಕಷ್ಟದ ಮಾರಾಟದಿಂದ ಕಂಪನಿಯು ಈಗ ಆರ್ಥಿಕ ಸಂಕಷ್ಟ ಎದುರಿಸುತ್ತಿದೆ. ದಿನಾಂಕ: 5.11.2000ಕ್ಕೆ ರೈತರಿಗೆ ಪಾವತಿಸಬೇಕಾದ ಸುಮಾರು ರೂ.72 ಲಕ್ಷಗಳ ಫಿಕ್ಸೆಡ್ ಡಿಪಾಸಿಟ್ ಬಾಕಿಯಿದೆ. ಪ್ರಸಕ್ತ (2004-05) ಕಬ್ಬು ಅರೆಯುವ ಹಂಗಾಮಿನಲ್ಲಿ ಕಬ್ಬು ಸರಬರಾಜುದಾರರಿಗೆ ರೂ.1.09 ಕೋಟಿಗಳ ಬಾಕಿ ಪಾವತಿಸಬೇಕಾಗಿದೆ.

ಕಾವೇರಿ ಕಣಿವೆಯಲ್ಲಿ ಕಳೆದ 2-3 ವರ್ಷಗಳಿಂದ ಸತತ ಬರಗಾಲದಿಂದಾಗಿ ಕಾರ್ಖಾನೆಯ ಪ್ರತಿದಿನದ ಕಬ್ಬು ನುರಿಸುವ ಸಾಮರ್ಥ್ಯವಾದ 5000 ಟನ್‌ಗಿಂತಲೂ ಕಡಿಮೆ ಪ್ರಮಾಣದಲ್ಲಿ ಕಬ್ಬು ಸರಬರಾಜಾಗಿರುತ್ತದೆ. ಪಾಂಡವಪುರ ಸಹಕಾರಿ ಸಕ್ಕರೆ ಕಾರ್ಖಾನೆ ವ್ಯಾಪ್ತಿಯ ಕಬ್ಬಿನ ಪ್ರದೇಶಗಳನ್ನು ಮೈಸೂರು ಸಕ್ಕರೆ ಕಾರ್ಖಾನೆಗೆ ಹಂಚಿಕೆ ಮಾಡಿದ ಕಾರಣ ಮುಂಬರುವ ತಿಂಗಳುಗಳಲ್ಲಿ ಕಬ್ಬು ನುರಿಸುವ ಪ್ರಮಾಣದಲ್ಲಿ ಸುಧಾರಣೆಯಾಗಲಿದೆ. ಪ್ರತಿನಿತ್ಯ 2000 ರಿಂದ 2500 ಮೆ.ಟನ್ ಕಬ್ಬು ಸರಬರಾಜು ಮಾಡಿಕೊಳ್ಳಲು ಪ್ರಯತ್ನಪಡಲಾಗುತ್ತಿದ್ದು, ಇದರಿಂದಾಗಿ ಕಾರ್ಖಾನೆಯ ಡಿಸ್ಟಿಲರಿಗೆ ಸಾಕಷ್ಟು ಕಾಕಂಬಿ ದೊರೆತು ರೆಕ್ಟಿಫೈಡ್ ಸ್ಪಿರಿಟ್ ತಯಾರಿಕೆಯಾಗಲಿದೆ.

2004-05ನೇ ಸಾಲಿಗೆ ಕಂಪನಿಯು ಕನಿಷ್ಟ 2 ಲಕ್ಷ ಮೆ.ಟನ್ ಕಬ್ಬು ಅರೆಯುವ ಗುರಿ ಹಾಕಿಕೊಳ್ಳಲಾಗಿತ್ತು. ಕಬ್ಬಿನ ಕೊರತೆಯ ಕಾರಣ ಹಾಗೂ ಸಕ್ಕರೆ ಇಳುವರಿಯ ಪ್ರಮಾಣ ಶೇ.5.80 ಇದ್ದುದರಿಂದ ಕಬ್ಬು ಅರೆಯುವ ಕಾರ್ಯವನ್ನು ನಿಲ್ಲಿಸಲಾಗಿದೆ. ಕಾರ್ಖಾನೆಯಲ್ಲಿ ಇರುವ ಸಕ್ಕರೆ ಸಂಗ್ರಹ 37,000 ಕ್ವಿಂಟಾಲ್‌ಗಳು. ಸಕ್ಕರೆಯ ದಾಸ್ತಾನಿನ ಮೇಲೆ ಹಾಗೂ ಕಡಿಮೆ ಇಳುವರಿಯ ಕಾರಣ ಬ್ಯಾಂಕರ್‌ಗಳು ದುಡಿಯುವ ಬಂಡವಾಳವನ್ನು ನೀಡಲು ಮುಂದೆ ಬರುತ್ತಿಲ್ಲ.

ಕಾರ್ಖಾನೆಯು ಪುನಶ್ಚೇತನ ಹೊಂದಲು ಹಾಗೂ ತನ್ನೆಲ್ಲ ಹೊಣೆಗಾರಿಕೆಯಿಂದ ಮುಕ್ತವಾಗಲು ಸರ್ಕಾರದಿಂದ ಈ ಕೆಳಕಂಡಂತೆ ಆರ್ಥಿಕ ಸಹಾಯ ಕೋರಿದೆ.

(ರೂ. ಲಕ್ಷಗಳಲ್ಲಿ)

| | | | |
|---|---|---|---|
| I | a) | 2002-03, 2003-04 ಮತ್ತು 2004-05ನೇ ಸಾಲಿನ ಕಬ್ಬು ಖರೀದಿ ತೆರಿಗೆ ಮನ್ನಾ | 384.00 |
| | b) | ರೆಕ್ಟಿಫೈಡ್ ಸ್ಪಿರಿಟ್ ವ್ಯತ್ಯಾಸದ ಮನ್ನಾ | 158.00 |
| | c) | ಮಾರಾಟ ತೆರಿಗೆ ಮನ್ನಾ | 1900.00 |
| | d) | ಬಾಕಿ ಮುಂದೂಡಿದ ಕಾರಣ ವಿಧಿಸಿರುವ ಬಡ್ಡಿ ಮನ್ನಾ | 65.00 |
| | | **ಒಟ್ಟು** | **2507.00** |
| II | a) | ಹಲವಾರು ಬ್ಯಾಂಕುಗಳಿಂದ ಪಡೆದಿರುವ ಸಾಲದ ಅದಲು-ಬದಲು (Swapping) | 4577.00 |
| | | **ಒಟ್ಟು ಮೊತ್ತ** | **7084.00** |

ತಕ್ಷಣದ ಅವಶ್ಯಕತೆ ಈ ಕೆಳಗಿನಂತೆ ಇದೆ:

| | | |
|---|---|---|
| 1. | ನೌಕರರಿಗೆ ಬಾಕಿ ಇರುವ ಶಾಸನಬದ್ಧ ಪಾವತಿಗೆ | 272.00 ಲಕ್ಷಗಳು |
| 2. | ವೇತನ ಬಾಕಿ | 92.00 ಲಕ್ಷಗಳು |
| 3. | ರೈತರಿಗೆ ನಿಶ್ಚಿತ ಠೇವಣಿ ಹಣ ಬಿಡುಗಡೆ | 37.00 ಲಕ್ಷಗಳು |
| 4. | ಬಾಕಿ ಇರುವ ಬಿಲ್ಲುಗಳು-(ಸರಬರಾಜುದಾರರಿಗೆ) | 122.00 ಲಕ್ಷಗಳು |
| 5. | ರೈತರ ಕಬ್ಬು ಖರೀದಿ ಬಾಕಿ | 150.00 ಲಕ್ಷಗಳು |
| | **ಒಟ್ಟು** | **673.00 ಲಕ್ಷಗಳು** |

ಆದುದರಿಂದ, ಮೈಸೂರು ಸಕ್ಕರೆ ಕಾರ್ಖಾನೆಯ ಮೇಲ್ಕಂಡ ಸ್ಥಿತಿಯನ್ನು ದಿನಾಂಕ: 13.01.2005 ರಂದು ನಡೆದ ಸಚಿವ ಸಂಪುಟದ ಮುಂದೆ ಮಂಡಿಸಲಾಯಿತು. ಸಚಿವ ಸಂಪುಟವು ಸದರಿ ವಿಷಯವನ್ನು ಪರಿಶೀಲಿಸಿ ಕಾರ್ಖಾನೆಯ ಪ್ರಸಕ್ತ ಸಾಲಿನ ಕಬ್ಬಿನ ನುರಿಸುವಿಕೆಗೆ ಬೇಕಾದ ಸಹಾಯದ ಬಗ್ಗೆ ತೀರ್ಮಾನ ತೆಗೆದುಕೊಳ್ಳುವಂತೆ ಮಾನ್ಯ ಉಪ ಮುಖ್ಯಮಂತ್ರಿಗಳು ಹಾಗೂ ಮಾನ್ಯ ಭಾರಿ ಮತ್ತು ಮಧ್ಯಮ ಪ್ರಮಾಣದ ಸಚಿವರುಗಳಿಗೆ ತೀರ್ಮಾನ ತೆಗೆದುಕೊಳ್ಳಲು ಅಧಿಕಾರ ನೀಡಿತು. ಅದರಂತೆ ದಿನಾಂಕ: 17.03.2005 ರಂದು ಮಾನ್ಯ ಉಪ ಮುಖ್ಯ ಮಂತ್ರಿಯವರ ಅಧ್ಯಕ್ಷತೆಯಲ್ಲಿ ಸಭೆ ನಡೆದು ಕಾರ್ಖಾನೆಯು ತನ್ನ ಚಟುವಟಿಕೆಗಳನ್ನು ಪ್ರಾರಂಭಿಸಲು ಈ ಕೆಳಕಂಡ ಬಾಬ್ತುಗಳಿಗೆ ಉಪಯೋಗಿಸುವ ಸಲುವಾಗಿ ಹಣ ಬಿಡುಗಡೆ ಮಾಡಲು ತೀರ್ಮಾನಿಸಲಾಗಿದೆ.

| | | |
|---|---|---|
| 1. | ರೈತರಿಗೆ ಪಾವತಿಸಬೇಕಾದ ಕಬ್ಬಿನ ಬಾಕಿಗಾಗಿ | ರೂ. 109.00 ಲಕ್ಷ |
| 2. | ಡಿಸೆಂಬರ್ 04 ಹಾಗೂ ಜನವರಿ 05ರ ವೇತನ ಬಾಕಿಗಾಗಿ | ರೂ. 171.00 ಲಕ್ಷ |
| 3. | ಸರಬರಾಜುದಾರರ ಬಾಕಿಗಾಗಿ | ರೂ. 143.00 ಲಕ್ಷ |
| 4. | ಯಂತ್ರೋಪಕರಣಗಳ ಸಜ್ಜುಗೊಳಿಸುವಿಕೆಗಾಗಿ | ರೂ. 200.00 ಲಕ್ಷ |
| 5. | ಸಹವಿದ್ಯುತ್ ಘಟಕಕ್ಕೆ | ರೂ. 550.00 ಲಕ್ಷ |
| | **ಒಟ್ಟು** | **ರೂ.1173.00 ಲಕ್ಷ** |

ಈ ಹಣವನ್ನು ರಾಜ್ಯದ ಸಾದಿಲ್ವಾರು ನಿಧಿಯಿಂದ ತಕ್ಷಣ ಹಣ ಬಿಡುಗಡೆಗೊಳಿಸಿ ತದನಂತರ ಪೂರಕ ಬೇಡಿಕೆಯಲ್ಲಿ ಸೇರಿಸಬೇಕೆಂದು ತೀರ್ಮಾನಿಸಲಾಯಿತು.

ಈ ಹಿನ್ನೆಲೆಯಲ್ಲಿ ವಿಷಯವನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಐ 202 ಎಸ್‌ಜಿಎಫ್ 2004, ಬೆಂಗಳೂರು, ದಿನಾಂಕ: 18ನೇ ಏಪ್ರಿಲ್ 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಮೈಸೂರು ಸಕ್ಕರೆ ಕಾರ್ಖಾನೆ ನಿಯಮಿತ, ಮಂಡ್ಯ, ಈ ಕಾರ್ಖಾನೆಗೆ ರೂ.6.23 ಕೋಟಿಗಳನ್ನು (ರೂ. ಆರು ಕೋಟಿ ಇಪ್ಪತ್ತೂರು ಲಕ್ಷಗಳು ಮಾತ್ರ) ಈ ಕೆಳಕಂಡ ಬಾಬ್ತುಗಳಿಗೆ ಉಪಯೋಗಿಸುವ ಸಲುವಾಗಿ ರಾಜ್ಯದ ಸಾದಿಲ್ವಾರು ನಿಧಿಯಿಂದ ಬಿಡುಗಡೆ ಮಾಡಲು ಸರ್ಕಾರದ ಮಂಜೂರಾತಿಯನ್ನು ನೀಡಲಾಗಿದೆ.

(ರೂ. ಲಕ್ಷಗಳಲ್ಲಿ)

| | | |
|---|---|---|
| 1. | ರೈತರಿಗೆ ಪಾವತಿಸಬೇಕಾದ ಕಬ್ಬಿನ ಬಾಕಿಗಾಗಿ | ರೂ. 109.00 ಲಕ್ಷ |
| 2. | ಡಿಸೆಂಬರ್ 04 ಹಾಗೂ ಜನವರಿ 05ರ ವೇತನ ಬಾಕಿಗಾಗಿ | ರೂ. 171.00 ಲಕ್ಷ |
| 3. | ಸರಬರಾಜುದಾರರ ಬಾಕಿಗಾಗಿ | ರೂ. 143.00 ಲಕ್ಷ |
| 4. | ಯಂತ್ರೋಪಕರಣಗಳ ಸಜ್ಜುಗೊಳಿಸುವಿಕೆಗಾಗಿ | ರೂ. 200.00 ಲಕ್ಷ |
| | **ಒಟ್ಟು** | **ರೂ. 623.00 ಲಕ್ಷ** |

2005-06ನೇ ಸಾಲಿನ ಅನುದಾನದಲ್ಲಿ ಯಾವುದೇ ಹಣವನ್ನು ಈ ಕಾರ್ಯಕ್ರಮಕ್ಕೆ ನಿಗದಿಪಡಿಸಿಲ್ಲದ ಕಾರಣ ಈ ಹಣವನ್ನು ಸಾದಿಲ್ವಾರು ಲೆಕ್ಕ ಶೀರ್ಷಿಕೆ "2852-08-201-0-07 ಮೈಷುಗರ್‌ಗೆ ಆರ್ಥಿಕ ಸಹಾಯ-100 ಆರ್ಥಿಕ ಸಹಾಯ" ರಡಿಯಲ್ಲಿ ಬಿಡುಗಡೆಗೆ ಮಂಜೂರು ಮಾಡಲಾಗಿದೆ.

ಸಾದಿಲ್ವಾರು ನಿಧಿಯಿಂದ ಹಣ ಬಿಡುಗಡೆಗೆ ಆದೇಶವನ್ನು ಆರ್ಥಿಕ ಇಲಾಖೆಯು ಪ್ರತ್ಯೇಕವಾಗಿ ಹೊರಡಿಸಲಿದೆ. ಆರ್ಥಿಕ ಇಲಾಖೆಯ ಆದೇಶವಿಲ್ಲದೆ ಯಾವುದೇ ಹಣವನ್ನು ಪಡೆಯಲು ಈ ಆದೇಶದಡಿ ಅವಕಾಶವಿರುವುದಿಲ್ಲ. ಹಣ ಸೆಳೆಯುವ ಅಧಿಕಾರಿಯು ಆಯುಕ್ತರು, ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರು ಆಗಿದ್ದು, ಸದರಿ ಅಧಿಕಾರಿಯು ಆರ್ಥಿಕ ಇಲಾಖೆಯು ಹೊರಡಿಸುವ ಆದೇಶದೊಂದಿಗೆ ಹಣ ಸೆಳೆಯಲು ಬಿಲ್ಲನ್ನು ಖಜಾನೆಗೆ ಸಲ್ಲಿಸಬೇಕು. ಆರ್ಥಿಕ ಇಲಾಖೆಯು ಪ್ರತ್ಯೇಕ ಆದೇಶ ಹೊರಡಿಸಿದ ನಂತರವೇ ಹಾಗೂ ಆದೇಶದ ಪ್ರತಿಯನ್ನು ಈ ಆದೇಶದೊಂದಿಗೆ ಲಗತ್ತಿಸಿ ಸಲ್ಲಿಸಿದ ನಂತರವೇ ಹಣ ಬಿಡುಗಡೆಗೆ ಖಜಾನೆಯು ಕ್ರಮ ವಹಿಸಬೇಕು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಎಫ್‌ಡಿ 803 ಇಎಕ್ಸ್‌ಪಿ-1/2005 ದಿನಾಂಕ: 18.04.2005ರ ಸಹಮತಿಯಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಪಿ. ಆನಂದ ಕುಮಾರ್**

ಪಿ.ಆರ್. 533 ಪೀಠಾಧಿಕಾರಿ (ಸಕ್ಕರೆ), ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

## COMMERCE & INDUSTRIES SECRETARIAT

**Subject:** Conversion of Purchase Tax on Sugarcane into Interest free Loan-reg.

**Read:** 1. Government Order No. CI/140/FMI/71, dated: 06.06.1973.
2. Letter No. RFD/CR-99/03-04, dated: 28.02.2005 from Commissioner of Commercial Taxes, Bangalore.

**PREAMBLE:**

In the Government order read at Sl.No.1 above, sanction has been accorded for conversion of purchase tax dues from sugar factories into interest free loan and it shall be recovered over a period of five years, after the expiry of the first ten years (concessional period) in equal annual installments to be paid before 30th September each year.

The Commissioner of Commercial Taxes in his letter read at (2) above, has sent a proposal for providing a sum of Rs.25,89,09,974.00 (Rupees Twentyfive crore Eightynine lakh Nine Thousand and Nine hundred seventy four only) for conversion of purchase tax on sugarcane into interest free loan in respect of the sugar factories as detailed in the annexure to this Government order.

The proposal has been examined in detail. Hence, the following order.

**GOVERNMENT ORDER No. CI 62 SGF 2005, Bangalore, Dated: 31st March 2005**

Government are pleased to accord sanction and release a sum of Rs.2589.10 Lakhs (Rupees Two Thousand five Hundred Eightynine Lakhs & Ten Thousand Only) for payment of purchase tax dues as loan to the sugar factories indicated in the annexure to this government order, subject to the condition that the said release is by way of book adjustment not involving out go of cash, by bebiting a sum of Rs.103.73 Lakhs (Rupees One Hundred Three Lakhs and Seventythree Thousand Only) in respect of two co-operatives sugar factories and a sum of Rs.2485.37 Lakhs (Rupees Two thousand four hundred Eight five Lakhs and Thirty-seven thousand only) in respect of nine private sugar factories under the Head of Account 6860-04-190-1-16(P) and equal amount shall be taken as receipt under the head of account 0040-00-102-0-01 Sales Tax by Contra entry as receipts from the concerned - sugar factories towards purchase tax on sugarcane. This is only a book adjustments and no cash out go involved. As no provision is made in the budget 2004-05 for the purpose, the required amount has been provided in the supplementary estimates 2004-05 (Final instalment).

The Accountant General, Bangalore is requested to carry out necessary adjustments as indicated above in the books of accounts for 2004-2005.

This order issued with the concurrence of the finance Department vide its U.O.Note No.FD/452/EXP-I/2005, dated: 30.03.2005.

By Order and in the Name of the Governor of Karnataka,

**P. ANANDA KUMAR**

Desk Officer (Sugar) Commerce & Industries Department.

**ANNEXURE TO GOVERNMENT ORDER No. CI 62 SGF 2005, Dated: 31st March 2003**

| **(A)** | **Co-operative Sugar Factories:-** | | |
|---|---|---|---|
| Sl.No. | Name of the Sugar Factory | Year | Amount |
| 1 | M/s Bhagyalakshmi Sahakari sakkari Karkhane Niyamith, Khanapur. | 2002-03 | 17,14,445.00 |
| 2 | M/s Raitara Sahakari sakkare karkhane, Mudhol | 2003-04 | 86,58,921.00 |
| | **Total** | | **1,03,73,366.00** |
| **(B)** | **Private Sugar Factories:-** | | |
| 1 | M/s Bannariamman, Sugar Ltd, Nanjangud. | 2003-04 | 8,30,09,811.00 |
| 2 | M/s. Prabhulingeshwara Sugar Works Ltd., Dharwad. | 2003-04 | 2,23,37,333.00 |
| 3 | M/s I.C.I. Sugars Ltd., Makavalli, K.R.Pet, Mandya. | 2002-03<br>2003-04 | 2,72,08,497.00<br>2,35,60,554-00 |
| 4 | M/s Renuka Sugars Ltd., Belgaum | 2003-04 | 3,00,92,187.00 |
| 5 | M/s Venkateshwara Power Projects, Badakihal, Chikkodi | 2003-04<br>2002-03 | 76,44,439,00<br>1,08,81,060.00 |
| 6 | M/s Athani Farmers Sugar Factory Ltd., Athani. | 2003-04 | 1,04,18,042.00 |
| 7 | M/s Jamkhandi Sugars, Jamkhandi. | 2003-04 | 1,76,70,049.00 |
| 8 | M/s. Nirani Sugars Ltd., Mudhol. | 2003-04 | 12,45,380.00 |
| 9 | M/s Shamnoor Sugars Ltd., Davangere. | 2003-04 | 1,44,69,256.00 |
| | **Total** | | **24,85,36,608.00** |
| | **Grand Total** | | **25,89,09,974.00** |

**P. ANANDA KUMAR**

P.R. 532 Desk Officer (Sugar) Commerce & Industries Department.

## ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಸಚಿವಾಲಯ

**ವಿಷಯ:** ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಇವರು ದಿನಾಂಕ: 20.4.2005 ರಂದು ಹೊಸದೆಹಲಿಯಲ್ಲಿ ನಡೆಯುವ ದತ್ತು ಮತ್ತು ಸಂಬಂಧಿಸಿದ ಇತರ ವಿಷಯಗಳ ಬಗ್ಗೆ ನಡೆಯುವ ಸಭೆಗೆ ಹಾಜರಾಗುವ ಬಗ್ಗೆ.

**ಓದಲಾಗಿದೆ:** 1. ಕಾರ್ಯದರ್ಶಿ, ಕಾರಾ ನವದೆಹಲಿ ಇವರು ಬರೆದ ದಿನಾಂಕ: 6.4.2004ರ ಪತ್ರ.-

2. ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ ಬೆಂಗಳೂರು ಇವರ ಪತ್ರ ಸಂಖ್ಯೆ: ಡಿಡಬ್ಲ್ಯೂಸಿ/ಪಿಎಸ್ಎನ್/2005-06, ದಿನಾಂಕ: 18.4.2005.

**ಪ್ರಸ್ತಾವನೆ:**

ಮೇಲೆ ಓದಲಾದ ದಿನಾಂಕ: 18.4.2005ರ ಪತ್ರದಲ್ಲಿ ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ ಬೆಂಗಳೂರು. ಇವರು ದಿನಾಂಕ: 20.4.2005 ರಂದು ಹೊಸದೆಹಲಿಯಲ್ಲಿ Central Adoption Agency ಇವರು ಉಲ್ಲೇಖ (1)ರ ದಿನಾಂಕ: 6.4.2004ರ ಪತ್ರದಲ್ಲಿ ದತ್ತು ಮತ್ತು ಸಂಬಂಧಿಸಿದ ಇತರೆ ವಿಷಯಗಳ ಬಗ್ಗೆ ನಡೆಯುವ ಸಭೆಗೆ ಇಲಾಖಾ ಮುಖ್ಯಸ್ಥರುಗಳು ಹಾಜರಾಗಬೇಕೆಂದು ಕೋರಿದ್ದಾರೆ. ತಮಗೆ ಈ ಸಭೆಗೆ ಹಾಜರಾಗಲು ಹಾಗೂ ವಿಮಾನದಲ್ಲಿ ಪ್ರಯಾಣ ಮಾಡಲು ಅನುಮತಿ ನೀಡುವಂತೆ ಕೋರಿರುತ್ತಾರೆ. ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಮಮಇ 190 ಎಸ್‌ಜೆಡಿ 2005, ಬೆಂಗಳೂರು, ದಿನಾಂಕ: 19ನೇ ಏಪ್ರಿಲ್ 2005**

ಶ್ರೀ ಗೋನಾಳ್ ಭೀಮಪ್ಪ, ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಬೆಂಗಳೂರು. ಇವರು ಕಾರಾ ನವದೆಹಲಿ ಇವರು ದತ್ತು ಮತ್ತು ಸಂಬಂಧಿಸಿದ ಇತರೆ ವಿಷಯಗಳ ಬಗ್ಗೆ ನವದೆಹಲಿಯಲ್ಲಿ ನಡೆಸುವ ಸಭೆಗೆ ಹಾಜರಾಗಲು ಅನುಮತಿ ನೀಡಲಾಗಿದೆ. ಇವರು ನಿಯಮಾನುಸಾರ ಪ್ರಯಾಣ ಭತ್ಯೆ ಹಾಗೂ ದಿನಭತ್ಯೆ ಪಡೆಯಲು ಅರ್ಹರಾಗಿರುತ್ತಾರೆ. ಈ ಪ್ರಯಾಣ ಭತ್ಯೆ ಹಾಗೂ ಹಾಜರಾದ ಅವಧಿಯನ್ನು ಕರ್ತವ್ಯದ ಅವಧಿಯೆಂದು ಪರಿಗಣಿಸಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯು ತನ್ನ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96 ದಿನಾಂಕ: 10.7.1996 ರಲ್ಲಿ ಸರ್ಕಾರದ ಕಾರ್ಯದರ್ಶಿಗಳಿಗೆ ನೀಡಲಾದ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಪ್ರ.ದ. ಸಿದ್ಧಾಂತಿ**

ಪಿ.ಆರ್. 534 ಸರ್ಕಾರದ ಅಧೀನ ಕಾರ್ಯದರ್ಶಿ-2, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ.

**ಕಂದಾಯ ಸಚಿವಾಲಯ**

**ವಿಷಯ:** ಶ್ರೀ ಎಂ.ಬಿ.ಗಂಗಾಧರ, ಹಿಂದಿನ ತಹಶೀಲ್ದಾರ್, ಕೊಪ್ಪ ತಾಲ್ಲೂಕು, ಚಿಕ್ಕಮಗಳೂರು ಜಿಲ್ಲೆ ಹಾಲಿ ನಿವೃತ್ತರು ಇವರ ವಿರುದ್ಧ ಇಲಾಖಾ ವಿಚಾರಣೆ ಜರುಗಿಸುವ ಬಗ್ಗೆ.

**ಓದಲಾಗಿದೆ:**
1) ಚಿಕ್ಕಮಗಳೂರು ಜಿಲ್ಲಾಧಿಕಾರಿಯವರ ದಿನಾಂಕ:28-10-2003ರ ಪತ್ರ ಸಂಖ್ಯೆ:ಎಂ 4/ಎಲ್ಎನ್‌ಡಿ/ಸಿಆರ್/202/2003-04.
2) ದಿನಾಂಕ:6-4-2004ರ ಕಾರಣ ಕೇಳುವ ನೋಟೀಸು ಸಂಖ್ಯೆ:ಕಂಇ 10 ಎಡಿಇ 2004.
3) ಶ್ರೀ ಎಂ.ಬಿ.ಗಂಗಾಧರ ಇವರ ದಿನಾಂಕ:14-7-2004ರ ಲಿಖಿತ ಉತ್ತರ.

**ಪ್ರಸ್ತಾವನೆ:**

ಶ್ರೀ ಎಂ.ಬಿ.ಗಂಗಾಧರ, ಹಿಂದಿನ ತಹಶೀಲ್ದಾರ್, ಕೊಪ್ಪ ತಾಲ್ಲೂಕು, ಚಿಕ್ಕಮಗಳೂರು ಜಿಲ್ಲೆ ಹಾಲಿ ನಿವೃತ್ತರು ಇವರು ಸದರಿ ತಾಲ್ಲೂಕಿನಲ್ಲಿ ಕಾರ್ಯನಿರ್ವಹಿಸುತ್ತಿದ್ದಾಗ ಸರ್ಕಾರದ ಸೂಚನೆ ಹಾಗೂ ಕಾನೂನನ್ನು ಉಲ್ಲಂಘಿಸಿ ಅಧಿಕಾರ ದುರುಪಯೋಗಪಡಿಸಿ ಕೊಂಡು ಚಿಕ್ಕಮಗಳೂರು ಜಿಲ್ಲೆಯ ಜಿಲ್ಲಾಧಿಕಾರಿಗಳ ದಿನಾಂಕ:5-6-2002ರ ಅಧಿಸೂಚನೆ ಸಂಖ್ಯೆ:ಎಫ್ಒಆರ್(1)ಕೊಪ್ಪ 2001-02ರ ಪ್ರಕಾರ ಕೊಪ್ಪ ತಾಲ್ಲೂಕಿನ ಕೆಲವು ಸರ್ಕಾರಿ ಜಮೀನುಗಳನ್ನು `ಅರಣ್ಯ ಮೀಸಲು` ಪ್ರದೇಶಗಳೆಂದು ಘೋಷಿಸಲಾಗಿದ್ದು ಅಂತಹ ಅರಣ್ಯ ಜಮೀನುಗಳ ವ್ಯಾಪ್ತಿಯಲ್ಲಿರುವ ಅನಧಿಕೃತ ಸಾಗುವಳಿಯನ್ನು 173 ಜನರಿಗೆ ಸಕ್ರಮಗೊಳಿಸಿ ಮಂಜೂರು ಮಾಡಿ ಸಾಗುವಳಿ ಚೀಟಿಗಳನ್ನು ನೀಡಿರುತ್ತಾರೆ. ಆ ರೀತಿ ಅಕ್ರಮ ಮಂಜೂರಾತಿ ನೀಡಿರುವ ಆದೇಶವನ್ನು ಸರ್ಕಾರದ ಮುಂದಿನ ಆದೇಶದವರೆಗೆ ತಡೆಹಿಡಿಯುವಂತೆ ಸರ್ಕಾರದ ಸ್ಪಷ್ಟ ಆದೇಶವಿದ್ದರೂ ಸಹ ಹಾಗೂ ಸರ್ಕಾರದ ಈ ಸೂಚನೆಯಂತೆ ಮುಂದಿನ ಆದೇಶದವರೆಗೆ ಜಮೀನು ಮಂಜೂರು ಮಾಡದಿರುವಂತೆ ಚಿಕ್ಕಮಗಳೂರು ಜಿಲ್ಲಾಧಿಕಾರಿಯವರ ದಿನಾಂಕ:19-2-2003ರ ಪತ್ರ ಸಂಖ್ಯೆ:ಎಂ 4:ಎಲ್ಎನ್‌ಡಿ/ಸಿಆರ್/174/2002-03ರ ಪ್ರಕಾರ ಕೊಪ್ಪ ತಾಲ್ಲೂಕಿನ ಅಂದಿನ ತಹಶೀಲ್ದಾರ್‌ರಾಗಿದ್ದ ಶ್ರೀ ಎಂ.ಬಿ.ಗಂಗಾಧರ ಇವರಿಗಿ ಿ ಸ್ಪಷ್ಟವಾಗಿ ತಿಳಿಸಲಾಗಿರುತ್ತದೆ. ಅಲ್ಲದೆ, 1980ರ ಅರಣ್ಯ(ಸಂರಕ್ಷಣಾ) ಕಾಯ್ದೆಯ ಕಲಂ 2ರ ಪ್ರಕಾರ ಅರಣ್ಯ ಜಮೀನುಗಳನ್ನು ಅರಣ್ಯೇತರ ಚಟುವಟಿಕೆಗಳಿಗೆ ಉಪಯೋಗಿಸುವುದನ್ನು ನಿಷೇಧಿಸಲಾಗಿದೆ. ಈ ಹಿನ್ನಲೆಯಲ್ಲಿ ಶ್ರೀ ಎಂ.ಬಿ.ಗಂಗಾಧರ ಇವರು ತಮ್ಮ ಅಧಿಕಾರವನ್ನು ದುರುಪಯೋಗಪಡಿಸಿಕೊಂಡು ಕರ್ತವ್ಯಲೋಪ ಎಸಗಿರುವುದು ಮೇಲ್ನೋಟಕ್ಕೆ ಕಂಡು ಬಂದಿರುವುದರಿಂದ ಇವರ ವಿರುದ್ಧ ಇಲಾಖಾ ವಿಚಾರಣೆ ಜರುಗಿಸುವಂತೆ ಮೇಲೆ ಕ್ರಮ ಸಂಖ್ಯೆ(1)ರಲ್ಲಿ ಓದಲಾದ ದಿನಾಂಕ:28-10-2003ರ ಪತ್ರದಲ್ಲಿ ಚಿಕ್ಕಮಗಳೂರು ಜಿಲ್ಲಾಧಿಕಾರಿಯವರು ಸರ್ಕಾರವನ್ನು ಕೋರಿರುತ್ತಾರೆ.

ಸದರಿ ಅಧಿಕಾರಿಯವರ ವಿರುದ್ಧದ ದೋಷಾರೋಪಣಾ ಪಟ್ಟಿಗಳನ್ನು ಅನುಬಂಧ 1ರಿಂದ 4ರ ವರೆಗೆ ಮೇಲೆ ಕ್ರಮ ಸಂಖ್ಯೆ(2)ರಲ್ಲಿ ಓದಲಾದ ದಿನಾಂಕ:06-04-2004ರಂದು ಕಾರಣ ಕೇಳುವ ನೋಟೀಸಿನೊಂದಿಗೆ ಜಾರಿಗೊಳಿಸಿ ಅದಕ್ಕೆ ಅವರ ಲಿಖಿತ ಉತ್ತರವನ್ನು ಸಲ್ಲಿಸುವಂತೆ ಸೂಚಿಸಲಾಗಿತ್ತು. ಅದಕ್ಕೆ ಉತ್ತರವಾಗಿ ಶ್ರೀ ಎಂ.ಬಿ. ಗಂಗಾಧರ ಇವರು ಮೇಲೆ ಕ್ರಮ ಸಂಖ್ಯೆ(3)ರಲ್ಲಿ ಓದಲಾದ ದಿನಾಂಕ:14-7-2004ರ ತಮ್ಮ ಲಿಖಿತ ಉತ್ತರದಲ್ಲಿ ಅವರ ವಿರುದ್ಧದ ಆರೋಪಗಳನ್ನು ಒಪ್ಪಿಕೊಳ್ಳದೆ ಅಲ್ಲಗೆಳೆದಿರುತ್ತಾರೆ ಹಾಗೂ ಅವರ ವಿರುದ್ಧ ಯಾವುದೇ ಶಿಸ್ತಿನ ಕ್ರಮ ಜರುಗಿಸದಂತೆ ಕೋರಿರುತ್ತಾರೆ. ಆದುದರಿಂದ ಆರೋಪಿತ ನಿವೃತ್ತ ಅಧಿಕಾರಿಯ ವಿರುದ್ಧದ ಆರೋಪಗಳು ಹಾಗೂ ಇದಕ್ಕೆ ಅವರು ಸಲ್ಲಿಸಿರುವ ಲಿಖಿತ ಹೇಳಿಕೆಯ ಸತ್ಯಾಸತ್ಯತೆಯನ್ನು ಕಂಡುಕೊಳ್ಳುವ ದೃಷ್ಟಿಯಿಂದ ಈ ಪ್ರಕರಣದಲ್ಲಿ ಇಲಾಖಾ ವಿಚಾರಣೆ ಜರುಗಿಸುವುದು ಸೂಕ್ತವೆಂದು ನಿರ್ಧರಿಸಿ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಆರ್‌ಡಿ 10 ಎಡಿಇ 2004, ಬೆಂಗಳೂರು, ದಿನಾಂಕ: 13ನೇ ಏಪ್ರಿಲ್ 2005**

ಪ್ರಸ್ತಾವನೆಯಲ್ಲಿ ಕೂಲಂಕಷವಾಗಿ ಪರಿಶೀಲಿಸಿರುವ ಹಿನ್ನೆಲೆಯಲ್ಲಿ 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ,ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳ ನಿಯಮ 11 ರಡಿಯಲ್ಲಿ ಹಾಗೂ ಶ್ರೀ ಎಂ.ಬಿ.ಗಂಗಾಧರ, ಹಿಂದಿನ ತಹಶೀಲ್ದಾರ್, ಕೊಪ್ಪ ತಾಲ್ಲೂಕು, ಚಿಕ್ಕಮಗಳೂರು ಜಿಲ್ಲೆ ಇವರು ಸೇವೆಯಿಂದ ಹಾಲಿ ನಿವೃತ್ತರಾಗಿರುವುದರಿಂದ ಇವರ ವಿರುದ್ಧದ ಆರೋಪಗಳ ಬಗ್ಗೆ ಇಲಾಖಾ ವಿಚಾರಣೆ ಜರುಗಿಸಲು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 214 ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರಕಾರವು ಶ್ರೀ ಎಸ್.ಎಸ್.ಸಂಗೊಳ್ಳಿ, ನಿವೃತ್ತ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ನಂ.415/2, `ಎಫ್` ಬ್ಲಾಕ್, ಸಹಕಾರನಗರ, ಬೆಂಗಳೂರು-92 ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಿದೆ.

ಶಿಸ್ತು ಪ್ರಾಧಿಕಾರದ ಪರವಾಗಿ ಪ್ರಕರಣವನ್ನು ವಿಚಾರಣಾಧಿಕಾರಿಯವರ ಮುಂದೆ ಮಂಡಿಸಲು 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ,ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳ ನಿಯಮ 11(5)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಚಿಕ್ಕಮಗಳೂರು ಜಿಲ್ಲಾಧಿಕಾರಿಗಳ ಕಛೇರಿಯ ಕೇಂದ್ರಸ್ಥಾನಿಕ ಸಹಾಯಕರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಿದೆ.

ವಿಚಾರಣಾಧಿಕಾರಿಗಳು ಬೆಂಗಳೂರು ನಗರ ಜಿಲ್ಲಾಧಿಕಾರಿಗಳ ಕಛೇರಿಯ ಆವರಣದಲ್ಲಿ ಅಥವಾ ಅವರು ಗುರುತಿಸಿ ನಿಗದಿ ಪಡಿಸಿದ ಸ್ಥಳದಲ್ಲಿ ಇಲಾಖಾ ವಿಚಾರಣೆಯನ್ನು ನಡೆಸತಕ್ಕದ್ದು. ಈ ಉದ್ದೇಶಕ್ಕಾಗಿ ಲಭ್ಯವಿರುವ ಕಛೇರಿಗಳಲ್ಲಿ ವಿಚಾರಣಾಧಿಕಾರಿಗಳಿಗೆ ಸ್ಥಳಾವಕಾಶವನ್ನು ಮಾಡುವುದು ಹಾಗೂ ಸಂಬಂಧಿಸಿದ ಕಛೇರಿಯಲ್ಲಿ ಲಭ್ಯವಿರುವ ಶೀಘ್ರಲಿಪಿಗಾರರ/ಬೆರಳಚ್ಚುಗಾರರ ಸಹಾಯವನ್ನು ಹಾಗೂ ಲೇಖನ ಸಾಮಾಗ್ರಿಗಳನ್ನು ಒದಗಿಸತಕ್ಕದ್ದು.

ಈ ಪ್ರಕರಣದ ವಿಚಾರಣೆಗಾಗಿ ವಿಚಾರಣಾಧಿಕಾರಿಗಳಿಗೆ ರೂ.5000/-(ಐದು ಸಾವಿರ ರೂಪಾಯಿ ಗಳು ಮಾತ್ರ) ಸಂಚಿತ ಸಂಭಾವನೆಯನ್ನು ಹಾಗೂ ದಿನಾಂಕ:4-3-2002ರ ಸರ್ಕಾರಿ ಆದೇಶ ಸಂಖ್ಯೆ:ಸಿಆಸುಇ 45 ಸೇಇವಿ 2001 ರನ್ವಯ 1000/-(ಒಂದು ಸಾವಿರ ರೂಪಾಯಿಗಳು ಮಾತ್ರ) ರೂ.ಗಳ ವಾಹನ ಭತ್ಯೆ(ಕನ್ವೇಯನ್ಸ್ ಅಲೋಯೆನ್ಸ್)ನ್ನು ವಿಚಾರಣಾಧಿಕಾರಿಗಳು ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿದ ನಂತರ ಚಿಕ್ಕಮಗಳೂರು ಜಿಲ್ಲಾಧಿಕಾರಿಗಳು ಪಾವತಿ ಮಾಡತಕ್ಕದ್ದು.

ವಿಚಾರಣಾಧಿಕಾರಿಗಳು ಇಲಾಖಾ ವಿಚಾರಣೆಯನ್ನು ಜರುಗಿಸಿ ವಿಚಾರಣಾ ವರದಿಯನ್ನು ಎರಡು ತಿಂಗಳೊಳಗಾಗಿ ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಂ.ಎಸ್.ಮಹಂತೇಶಯ್ಯ**
ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ(ಸೇವೆಗಳು-3).

ಪಿ.ಆರ್. 539

**ವಿಷಯ:** ಶ್ರೀ ಎಸ್.ಆರ್. ಹಿರೇಮಠ್, ದ್ವಿತೀಯ ದರ್ಜೆ ಸಹಾಯಕ ಮತ್ತು ಶ್ರೀ ಕೆ.ಆರ್. ನಲ್ಲತವಾಡ ಜವಾನ (ಇಬ್ಬರೂ ಮುದ್ದೇಬಿಹಾಳ ತಾಲ್ಲೂಕು ಕಛೇರಿ) ಇವರನ್ನು ಭ್ರಷ್ಟಾಚಾರದ ಆರೋಪದಿಂದ ಮುಕ್ತರನ್ನಾಗಿಸುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರದ ಆದೇಶ ಸಂಖ್ಯೆ: ಕಂಇ 396 ಬಿಎಂಎಂ 02, ದಿನಾಂಕ: 11.11.2002.

2) ಮಾನ್ಯ ಲೋಕಾಯುಕ್ತ, ಬೆಂಗಳೂರು ಇವರ ಪತ್ರ ಸಂಖ್ಯೆ: ಲೋಕ್:ಎಆರ್ಇ-3:ಇಎನ್‌ಕ್ಯೂ-109:2002-03, ದಿನಾಂಕ: 03.03.2005.

**ಪ್ರಸ್ತಾವನೆ:**

ಶ್ರೀ ಎಸ್.ಆರ್. ಹಿರೇಮಠ್, ದ್ವಿತೀಯ ದರ್ಜೆ ಸಹಾಯಕ ಮತ್ತು ಶ್ರೀ ಕೆ.ಆರ್. ನಲ್ಲತ್‌ವಾಡ, ಜವಾನ, ಮುದ್ದೇಬಿಹಾಳ ತಾಲ್ಲೂಕು ಕಛೇರಿ ಇವರು ಇದೇ ಕಛೇರಿಯ ವಾಹನ ಚಾಲಕರಾದ ಶ್ರೀ ಸಂಗಪ್ಪ ಬಸಪ್ಪ ತುಂಬದ ಎಂಬುವವರ ಪ್ರಯಾಣ ಭತ್ಯೆ ಬಿಲ್ಲನ್ನು ತಯಾರಿಸುವ ಸಲುವಾಗಿ ದಿನಾಂಕ: 10.7.1996 ರಂದು ಅಕ್ರಮ ಸಂಭಾವನೆ ಪಡೆಯುತ್ತಿದ್ದಾಗ ಲೋಕಾಯುಕ್ತ ಪೊಲೀಸರಿಗೆ ಸಿಕ್ಕಿಬಿದ್ದ ಹಿನ್ನಲೆಯಲ್ಲಿ ಕರ್ನಾಟಕ ಸಿವಿಲ್ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮ 14-ಎ ರಡಿಯಲ್ಲಿ ಇಲಾಖಾ ವಿಚಾರಣೆ ನಡೆಸಲು ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಸರ್ಕಾರದ ಆದೇಶದಲ್ಲಿ ಮಾನ್ಯ ಉಪ ಲೋಕಾಯುಕ್ತರಿಗೆ ವಹಿಸಲಾಗಿತ್ತು.

ಶ್ರೀ ಎಸ್.ಆರ್. ಹಿರೇಮಠ, ದ್ವಿತೀಯ ದರ್ಜೆ ಸಹಾಯಕ ಮತ್ತು ಶ್ರೀ ಕೆ.ಆರ್. ನಲ್ಲತವಾಡ, ಜವಾನ, ಇಬ್ಬರೂ ಮುದ್ದೇಬಿಹಾಳ ತಾಲ್ಲೂಕು ಕಛೇರಿ, ಇವರ ವಿರುದ್ಧ ಲೋಕಾಯುಕ್ತ ಕಛೇರಿಯ ಅಡಿಶಿನಲ್ ರಿಜಿಸ್ಟ್ರಾರ್ ಆಫ್ ಎನ್‌ಕ್ವೈರೀಸ್-3 ರವರು ಇಲಾಖಾ ವಿಚಾರಣೆ ನಡೆಸಿ ಮಾನ್ಯ ಉಪ ಲೋಕಾಯುಕ್ತರಿಗೆ ವಿಚಾರಣಾ ವರದಿಯನ್ನು ಸಲ್ಲಿಸಿರುತ್ತಾರೆ. ವಿಚಾರಣಾಧಿಕಾರಿಗಳು ಆಪಾದಿತ ನೌಕರರ ಮೇಲಿನ ಆರೋಪಗಳು ಸಾಬೀತಾಗಿಲ್ಲವೆಂದು ಅಭಿಪ್ರಾಯ ಪಟ್ಟಿದ್ದಾರೆ. ವಿಚಾರಣಾಧಿಕಾರಿಗಳ ಈ ನಿಲುವನ್ನು ಒಪ್ಪಿ ಸದರಿ ನೌಕರರನ್ನು ಆರೋಪದಿಂದ ಮುಕ್ತರನ್ನಾಗಿಸಿ ಇವರ ವಿರುದ್ಧ ಹೂಡಿದ್ದ ಇಲಾಖಾ ವಿಚಾರಣೆಯನ್ನು ಕೈಬಿಡಲು ಗೌ. ಉಪ ಲೋಕಾಯುಕ್ತರವರು ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಪತ್ರದಲ್ಲಿ ಸರ್ಕಾರಕ್ಕೆ ಶಿಫಾರಸ್ಸು ಮಾಡಿದ್ದಾರೆ.

ಮೇಲ್ಕಂಡ ಎಲ್ಲಾ ಅಂಶಗಳನ್ನು ಕೂಲಂಕಶವಾಗಿ ಪರಿಶೀಲಿಸಿ ಗೌ. ಉಪ ಲೋಕಾಯುಕ್ತರವರು ಮಾಡಿದ ಶಿಫಾರಸ್ಸನ್ನು ಒಪ್ಪಿ ಸರ್ಕಾರವು ಶ್ರೀ ಎಸ್.ಆರ್. ಹಿರೇಮಠ, ದ್ವಿತೀಯ ದರ್ಜೆ ಸಹಾಯಕ ಮತ್ತು ಶ್ರೀ ಕೆ.ಆರ್. ನಲ್ಲತವಾಡ, ಜವಾನ ಇವರ ಮೇಲಿನ ಇಲಾಖಾ ವಿಚಾರಣೆಯನ್ನು ಕೈಬಿಡಲು ನಿರ್ಧರಿಸಿ ಈ ಕೆಳಕಂಡ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಕಂಇ 396 ಬಿಎಂಎಂ 2002, ಬೆಂಗಳೂರು, ದಿನಾಂಕ: 6ನೇ ಏಪ್ರಿಲ್ 2005**

ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳ ಹಿನ್ನಲೆಯಲ್ಲಿ ಶ್ರೀ ಎಸ್.ಆರ್. ಹಿರೇಮಠ, ದ್ವಿತೀಯ ದರ್ಜೆ ಸಹಾಯಕ ಮತ್ತು ಶ್ರೀ ಕೆ.ಆರ್. ನಲ್ಲತವಾಡ್, ಜವಾನ ಇಬ್ಬರೂ ಮುದ್ದೇಬಿಹಾಳ ತಾಲ್ಲೂಕು ಕಛೇರಿ, ಇವರ ವಿರುದ್ಧ ಮಾಡಲಾದ ಭ್ರಷ್ಟಾಚಾರದ ಆರೋಪ ಸಾಬೀತಾಗಿಲ್ಲದ ಕಾರಣ ಇವರನ್ನು ಆರೋಪದಿಂದ ಮುಕ್ತರನ್ನಾಗಿಸಿ ಇವರ ವಿರುದ್ಧ ಹೂಡಲಾದ ಇಲಾಖಾ ವಿಚಾರಣೆಯನ್ನು ಕೈಬಿಟ್ಟು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಡಿ.ಬಿ. ಗಣಾಚಾರಿ**

ಪಿ.ಆರ್. 540                    ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ, (ಸೇವೆಗಳು).

**ವಿಷಯ:** ಪ್ರಕೃತಿ ವಿಕೋಪದಡಿಯಲ್ಲಿ ಕೈಗೊಳ್ಳುವ ಪರಿಹಾರ ಕಾರ್ಯಗಳ ಪರಿವೀಕ್ಷಣೆಗಾಗಿ ಜಿಲ್ಲಾಮಟ್ಟದ ಪರಿಹಾರ ಸಮಿತಿಯನ್ನು ಪುನರ್ ರಚಿಸುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರಿ ಆದೇಶ ಸಂಖ್ಯೆ.ಆರ್‌ಡಿ 100 ಟಿಎಸ್‌ವೈ 95 ದಿ:29.7.95.

2) ಅಧಿಸೂಚನೆ ಸಂಖ್ಯೆ:ಜಿಎಸ್ 22 ಜಿಓಬಿ 2004 ದಿನಾಂಕ 23.2.04.

3) ಸರ್ಕಾರದ ಆದೇಶ ಸಂಖ್ಯೆ. ಆರ್‌ಡಿ 68 ಟಿಎಸ್‌ವೈ 2002 ದಿನಾಂಕ: 12.3.2004.

**ಪ್ರಸ್ತಾವನೆ:**

ರಾಜ್ಯದಲ್ಲಿ ನೈಸರ್ಗಿಕ ವಿಕೋಪ ಸಂಭವಿಸಿದಾಗ ಅಂದರೆ ಬರ, ಅತಿವೃಷ್ಟಿ, ಪ್ರವಾಹ, ಭೂಕಂಪ, ಅಗ್ನಿ ದುರಂತ ಇತ್ಯಾದಿಗಳು ಸಂಭವಿಸಿದಾಗ ಕೈಗೊಳ್ಳುವ ಪರಿಹಾರ ಕಾರ್ಯಗಳ ಪರಿವೀಕ್ಷಣೆಗಾಗಿ ಸಂಬಂಧಪಟ್ಟ ಜಿಲ್ಲಾ ಉಸ್ತುವಾರಿ ಸಚಿವರ ಅಧ್ಯಕ್ಷತೆಯಲ್ಲಿ ಜಿಲ್ಲಾ ಪರಿಹಾರ ಸಮಿತಿಯನ್ನು ಮೇಲೆ(1) ರಲ್ಲಿ ಓದಲಾದ ಆದೇಶದಲ್ಲಿ ರಚಿಸಲಾಗಿತ್ತು.

ಮೇಲೆ (2)ರಲ್ಲಿ ಓದಲಾದ ಅಧಿಸೂಚನೆ ಪ್ರಕಾರ ರಾಜ್ಯದಲ್ಲಿನ ವಿಧಾನಸಭೆಯನ್ನು ದಿನಾಂಕ 23.2.2004ರಂದು ಅನ್ವಯವಾಗುವಂತೆ ವಿಸರ್ಜಿಸಿರುವುದರಿಂದ ಹಾಗೂ ಚುನಾವಣಾ ನೀತಿ ಸಂಹಿತೆಯು ಜಾರಿಯಲ್ಲಿದ್ದುದರಿಂದ ಸದರಿ ಜಿಲ್ಲಾಮಟ್ಟದ ಉಸ್ತುವಾರಿ ಸಮಿತಿಯನ್ನು ಸರ್ಕಾರದ ಆದೇಶ ಸಂಖ್ಯೆ. ಆರ್‌ಡಿ 68 ಟಿಎಸ್‌ವೈ 2002 ದಿನಾಂಕ 12.3.2004ರಲ್ಲಿ ಪುನರ್ ರಚಿಸಲಾಗಿತ್ತು. ಈಗ ಹೊಸ ಸರ್ಕಾರ ಅಸ್ತಿತ್ವಕ್ಕೆ ಬಂದಿರುವುದರಿಂದ ಸದರಿ ಸಮಿತಿಯನ್ನು ಪುನರ್ ರಚಿಸಿ ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಆದೇಶ ಸಂಖ್ಯೆ. ಆರ್‌ಡಿ 68 ಟಿಎಸ್‌ವೈ 2002, ಬೆಂಗಳೂರು, ದಿನಾಂಕ: 7ನೇ ಏಪ್ರಿಲ್ 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಪ್ರಕೃತಿ ವಿಕೋಪಗಳಡಿಯಲ್ಲಿ ಪರಿಹಾರ ಕಾರ್ಯಗಳ ಪರಿವೀಕ್ಷಣೆಗಾಗಿ ಜಿಲ್ಲಾ ಉಸ್ತುವಾರಿ ಸಚಿವರ ಅಧ್ಯಕ್ಷತೆಯಲ್ಲಿ ಈ ಕೆಳಕಂಡಂತೆ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಜಿಲ್ಲಾಮಟ್ಟದ ಪ್ರಕೃತಿ ವಿಕೋಪ ಪರಿಹಾರ ಸಮಿತಿಯನ್ನು ಪುನರ್ ರಚಿಸಲಾಗಿದೆ.

| | | |
|---|---|---|
| 1 | ಜಿಲ್ಲಾ ಉಸ್ತುವಾರಿ ಸಚಿವರು | ಅಧ್ಯಕ್ಷರು |
| 2 | ಜಿಲ್ಲಾ ಪಂಚಾಯತ್ ಅಧ್ಯಕ್ಷರು | ಉಪಾಧ್ಯಕ್ಷರು |
| 3 | ಜಿಲ್ಲೆಯ ಲೋಕಸಭಾ ಮತ್ತು ರಾಜ್ಯಸಭಾ ಸದಸ್ಯರು | ಸದಸ್ಯರು |
| 4 | ಜಿಲ್ಲೆಯ ಎಲ್ಲಾ ಶಾಸಕರು | ಸದಸ್ಯರು |
| 5 | ಜಿಲ್ಲೆಯ ಎಲ್ಲಾ ತಾಲ್ಲೂಕು ಪಂಚಾಯತ್ ಅಧ್ಯಕ್ಷರು | ಸದಸ್ಯರು |

| | | |
|---|---|---|
| 6 | ಜಿಲ್ಲಾ ಪಂಚಾಯತ್‌ನ ಮುಖ್ಯ ಕಾರ್ಯ ನಿರ್ವಹಣಾಧಿಕಾರಿ | ಸದಸ್ಯರು |
| 7 | ಸಂಬಂಧಪಟ್ಟ ಅಧೀಕ್ಷಕ ಇಂಜಿನಿಯರ್ (ಸಣ್ಣ ನೀರಾವರಿ) | ಸದಸ್ಯರು |
| 8 | ಸಂಬಂಧಪಟ್ಟ ಅಧೀಕ್ಷಕ ಇಂಜಿನಿಯರ್ (ಪಿ.ಹೆಚ್.ಇ) | ಸದಸ್ಯರು |
| 9 | ಜಿಲ್ಲಾ ಪೋಲೀಸ್ ವರಿಷ್ಠಾಧಿಕಾರಿ | ಸದಸ್ಯರು |
| 10 | ಸಂಬಂಧಪಟ್ಟ ಜಂಟಿ ನಿರ್ದೇಶಕರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ | ಸದಸ್ಯರು |
| 11 | ಸಂಬಂಧಪಟ್ಟ ಕಾರ್ಯಕಾರಿ ಇಂಜಿನಿಯರ್, ಜಿಲ್ಲಾ ಪರಿಷತ್ | ಸದಸ್ಯರು |
| 12 | ಸಂಬಂಧಪಟ್ಟ ಕಾರ್ಯಕಾರಿ ಇಂಜಿನಿಯರ್, ಕರ್ನಾಟಕ ವಿದ್ಯುಚ್ಛಕ್ತಿ ಮಂಡಳಿ | ಸದಸ್ಯರು |
| 13 | ಜಿಲ್ಲಾ ಅರಣ್ಯಾಧಿಕಾರಿ | ಸದಸ್ಯರು |
| 14 | ಪ್ರಧಾನ ಕೃಷಿ ಅಧಿಕಾರಿ | ಸದಸ್ಯರು |
| 15 | ಜಿಲ್ಲೆಯ ಜಿಲ್ಲಾಧಿಕಾರಿ | ಸದಸ್ಯ ಕಾರ್ಯದರ್ಶಿ-ಸಂಘಟನೆಕಾರ |

**ಸಮಿತಿಯ ಕರ್ತವ್ಯಗಳು:**

1. ಪ್ರಕೃತಿ ವಿಕೋಪಗಳು ಸಂಬಂಧಿಸಿದಂತಹ ಸಂದರ್ಭದಲ್ಲಿ ಪರಿಹಾರ ಕಾರ್ಯಗಳನ್ನು ತಕ್ಷಣವೇ ಕೈಗೊಳ್ಳುವುದು, ಪರಿಹಾರ ಕಾರ್ಯಾಚರಣೆಗಳು ಸರಿಯಾಗಿ ನಡೆಯುತ್ತಿವೆಯೇ ಎಂಬುದನ್ನು ಸಮಿತಿಯು ಖುದ್ದಾಗಿ ಪರಿಶೀಲಿಸುವುದು.
2. ಹಾನಿಗೊಂಡ ಖಾಸಗಿ ಆಸ್ತಿಗಳ ಸಂತ್ರಸ್ಥ ಮಾಲೀಕರಿಗೆ ನಿಯಮಗಳಿಗನುಸಾರವಾಗಿ ಸರಿಯಾಗಿ ಹಾಗೂ ವಿಳಂಬವಿಲ್ಲದೆ ಪರಿಹಾರ ಪಾವತಿಯಾಗುತ್ತಿದೆಯೇ ಎಂಬುದನ್ನು ಪರಿಶೀಲಿಸುವುದು.
3. ಪ್ರಕೃತಿ ವಿಕೋಪಗಳಾದಂತಹ ಸಂದರ್ಭಗಳಲ್ಲಿ ಸ್ಥಾಪಿಸಲಾಗುವ ಪರಿಹಾರ ಕೇಂದ್ರಗಳು ಸುವ್ಯವಸ್ಥಿತವಾಗಿ ಕಾರ್ಯ ನಿರ್ವಹಿಸುತ್ತಿವೆಯೇ ಎಂಬುದನ್ನು ಪರಿಶೀಲಿಸಬೇಕು; ಸಂತ್ರಸ್ತರಿಗೆ ತಕ್ಷಣದ ಪರಿಹಾರ ಒದಗಿಸುವುದು.
4. ಉದ್ಯೋಗಸೃಜನೆ ಕಾರ್ಯಕ್ರಮಗಳಡಿಯಲ್ಲಿ ಕೃಷಿಕಾರ್ಮಿಕರಿಗೆ ಆದ್ಯತೆ ನೀಡಲಾಗುತ್ತಿದೆಯೇ ಎಂಬುದನ್ನು ಗಮನಿಸುವುದು; ಪರಿಹಾರ ಕಾರ್ಯಕ್ರಮಗಳನ್ನು ಅನುಷ್ಠಾನಗೊಳಿಸುವವರಿಗೆ ಸಂಬಂಧಪಟ್ಟ ಅಧಿಕಾರಿಗಳೊಡನೆ ಸಮನ್ವಯ ಸಾಧಿಸುವುದು.
5. ಪರಿಹಾರ ಕಾರ್ಯಗಳಿಗಾಗಿ ಸರ್ಕಾರದಿಂದ ಬಿಡುಗಡೆ ಮಾಡಲಾದ ಅನುದಾನವು ಉದ್ದೇಶಿತ ಕಾರ್ಯಕ್ಕೆ ಹಾಗೂ ಸಮರ್ಪಕವಾಗಿ ವೆಚ್ಚ ಮಾಡಲಾಗುತ್ತಿದೆಯೇ ಎಂಬುದನ್ನು ಪರಿಶೀಲಿಸುವುದು.
6. ಸಮಿತಿಯು ಸಾಮರಸ್ಯವಾಗಿ ತಿಂಗಳಿಗೊಮ್ಮೆ ಸಭೆ ಸೇರುವುದು; ಆದರೆ ನೈಸರ್ಗಿಕ ವಿಕೋಪಗಳು ಸಂಬಂಧಿಸಿದಂತಹ ವಿಶೇಷ ಸಂದರ್ಭಗಳಲ್ಲಿ ಸಮಿತಿಯು ಕನಿಷ್ಠ ಒಂದು ವಾರಕ್ಕೆ ಒಮ್ಮೆಯಾದರೂ ಸಭೆ ಸೇರುವುದು.

2. ಜಿಲ್ಲೆಯಲ್ಲಿನ ಪರಿಸ್ಥಿತಿಯ ತೀವ್ರತೆಯನ್ನು ಅನುಸರಿಸಿ, ಅಗತ್ಯ ಎನಿಸಿದಲ್ಲಿ ಪರಿಹಾರ ಕಾರ್ಯಾಚರಣೆಯನ್ನು ಸೂಕ್ತವಾಗಿ ರೂಪಿಸಿಕೊಳ್ಳುವ ಅಧಿಕಾರವು ಸಮಿತಿಗಿದೆ.

3. ಹೆಚ್ಚಿನ ಪರಿಹಾರ ಕಾರ್ಯಗಳ ಬಗ್ಗೆ ಅಗತ್ಯವಿದ್ದಲ್ಲಿ, ಸರ್ಕಾರಕ್ಕೆ ಶಿಫಾರಸ್ಸನ್ನು ಕಳುಹಿಸುವುದು.

4. ಸಮಿತಿಯು ಅಪೇಕ್ಷೆ ಪಟ್ಟಲ್ಲಿ, ಅವಶ್ಯವೆನಿಸಿದಲ್ಲಿ ಯಾವುದೇ ವ್ಯಕ್ತಿಯನ್ನು ಸಮಿತಿಯ ಸದಸ್ಯರಾಗಿ ನೇಮಿಸಿ ಕೊಳ್ಳಬಹುದು ಹಾಗೂ ಅವಶ್ಯಕವೆಂದು ಕಂಡುಬಂದ ಯಾವುದೇ ಇಲಾಖೆಯ ಅಧಿಕಾರಿಯನ್ನು ಸಭೆಗೆ ಆಹ್ವಾನಿಸಬಹುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಎಸ್. ದೇಸಾಯಿ**

ಪಿ.ಆರ್. 541

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಪರಿಹಾರ ಮತ್ತು ಸೇವೆಗಳು-೨).

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ:** ಡಾ: ಚಂದ್ರಶೇಖರ್ ನಾಯಕ್, ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಧಿಕಾರಿ, ಬೆಂಗಳೂರು (ಗ್ರಾಮಾಂತರ) ಜಿಲ್ಲೆ ಇವರನ್ನು ಕರ್ತವ್ಯ ನಿರ್ಲಕ್ಷತನ ಆರೋಪದ ಮೇಲೆ ಸರ್ಕಾರಿ ಸೇವೆಯಿಂದ ಅಮಾನತ್ತುಗೊಳಿಸುವ ಆದೇಶ.

**ಪ್ರಸ್ತಾವನೆ:**

ಬೆಂಗಳೂರು (ಗ್ರಾಮಾಂತರ) ಜಿಲ್ಲೆ, ನೆಲಮಂಗಲ ತಾಲ್ಲೂಕಿನ ಸುತ್ತಮುತ್ತಲಿನ ಗ್ರಾಮದ ಗ್ರಾಮಸ್ಥರು ಕಳ್ಳಭಟ್ಟಿ ಸರಾಯಿ ಸೇವನೆಯಿಂದ ಸುಮಾರು 21 ಜನ ದುರ್ಮರಣ ಹೊಂದಿದ್ದು ಸುಮಾರು 35 ಜನ ಅಸ್ವಸ್ಥರಾಗಿರುವುದಾಗಿ ತಿಳಿದುಬಂದಿದೆ. ಇಂತಹ ಘೋರ ಘಟನೆ ನಡೆದಿದ್ದು, ಈ ಸಂಬಂಧ ಈ ಕ್ಷೇತ್ರದ ನಿಯಂತ್ರಣಾಧಿಕಾರಿಯಾದ ಡಾ: ಚಂದ್ರಶೇಖರ ನಾಯಕ್ ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಧಿಕಾರಿ, ಬೆಂ. ಗ್ರಾ. ಜಿಲ್ಲೆ ಇವರು ಈ ಕಲುಷಿತ ಸರಾಯಿ ಸೇವನೆಯಿಂದ ಮರಣ ಹೊಂದಿದ ವ್ಯಕ್ತಿಗಳ ಶವಪರೀಕ್ಷೆ ಮತ್ತು ಅಸ್ವಸ್ಥರಾಗಿ ಚಿಕಿತ್ಸೆಗಾಗಿ ಬಂದ ರೋಗಿಗಳ ಆರೈಕೆ/ಚಿಕಿತ್ಸೆ ಮುಂತಾದವುಗಳ ಬಗ್ಗೆ ಅಗತ್ಯ ಮತ್ತು ತುರ್ತು ಕ್ರಮ ಜರುಗಿಸುವಲ್ಲಿ ಸಂಪೂರ್ಣ ವಿಫಲರಾಗಿರುವುರಲ್ಲದೆ ಈ ಬಗ್ಗೆ ಯಾವುದೇ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿರುವುದಿಲ್ಲ. ಅದಲ್ಲದೆ, ಘಟನೆ ನಡೆದ ಸ್ಥಳಕ್ಕೆ ಸರ್ಕಾರದ ಸನ್ಮಾನ್ಯ ಮುಖ್ಯಮಂತ್ರಿಯವರು ಹಾಗೂ ಉಪ ಮುಖ್ಯ ಮಂತ್ರಿಯವರು ದಿನಾಂಕ: 13.4.2005 ರಂದು ಭೇಟಿ ನೀಡಿದ ಸಮಯದಲ್ಲಿ ಮುಖ್ಯ ಮಂತ್ರಿಯವರ ಕಛೇರಿಯಿಂದ ಸೂಚನೆ ನೀಡಿದ್ದರೂ ಸಹ ಡಾ: ಚಂದ್ರಶೇಖರ ನಾಯಕ್ ರವರು ಹಾಜರಿರದೇ ಗೈರು ಹಾಜರಾಗಿ ದುರ್ನಡತೆ ಎಸಗಿರುವರು.

ಬೆಂಗಳೂರು ಜಿಲ್ಲಾಧಿಕಾರಿಗಳು ಮತ್ತು ಬೆಂಗಳೂರು (ನಗರ) ಜಿಲ್ಲೆಯ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಧಿಕಾರಿಗಳು ಈ ಬಗ್ಗೆ ಮುಂದಿನ ಅಗತ್ಯ ಕ್ರಮ ಜರುಗಿಸುವಂತೆ ಸೂಚನೆ ನೀಡಿದ್ದರೂ ಸಹ ಯಾವುದೇ ರೀತಿಯ ಕ್ರಮ ಜರುಗಿಸುವಲ್ಲಿ ವಿಫಲರಾಗಿದ್ದು, ಇವರ ಈ ವರ್ತನೆಯು ಕ್ಷಮಿಸಲಾರದ ಅಪರಾಧವಾಗಿರುವುದು ಮೇಲು ನೋಟಕ್ಕೆ ಸಾಬೀತಾಗಿದೆ. ಆದುದರಿಂದ ಡಾ: ಚಂದ್ರಶೇಖರ ನಾಯಕ್, ಜಿಲ್ಲಾ ಆರೋಗ್ಯ

ಮತ್ತು ಕುಟುಂಬ ಕಲ್ಯಾಣ ಅಧಿಕಾರಿ, ಬೆಂಗಳೂರು (ಗ್ರಾಮಾಂತರ) ಜಿಲ್ಲೆ ಇವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಸರ್ಕಾರಿ ಸೇವೆಯಿಂದ ಅಮಾನತ್ತಿನಲ್ಲಿರಿಸಲು ಸರ್ಕಾರವು ತೀರ್ಮಾನಿಸಿದೆ. ಆದುದರಿಂದ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಆಕುಕ 100 ಎಂಎಸ್ಎ 2005, ಬೆಂಗಳೂರು, ದಿನಾಂಕ: 15ನೇ ಏಪ್ರಿಲ್ 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದಾಗಿ, ಸರ್ಕಾರವು ಕರ್ನಾಟಕ ನಾಗರೀಕ ಸೇವಾ (ವ.ನಿ.ಮೇ) ನಿಯಮಾವಳಿಗಳು 1957ರ ನಿಯಮ 10(1)(ಡಿ) ರಲ್ಲಿ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಡಾ: ಚಂದ್ರಶೇಖರ ನಾಯಕ್, ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಧಿಕಾರಿ, ಬೆಂಗಳೂರು (ಗ್ರಾಮಾಂತರ) ಜಿಲ್ಲೆ, ಇವರನ್ನು ಅವರ ವಿರುದ್ಧ ಶಿಸ್ತು ಕ್ರಮ ಬಾಕಿ ಇರಿಸಿ, ತಕ್ಷಣದಿಂದ ಜಾರಿಗೆ ಬರುವಂತೆ ಸರ್ಕಾರಿ ಸೇವೆಯಿಂದ ಅಮಾನತ್ತುಗೊಳಿಸಿದೆ. ಸದರಿ ಅಧಿಕಾರಿಯು ಅಮಾನತ್ತಿನ ಅವಧಿಯಲ್ಲಿ ನಿಯಮಾನುಸಾರ ಜೀವನಾಂಶ ಭತ್ಯೆ ಪಡೆಯಲು ಅರ್ಹರಿರುತ್ತಾರೆ. ಸಕ್ಷಮ ಪ್ರಾಧಿಕಾರದ ಪೂರ್ವಾನುಮತಿ ಇಲ್ಲದೆ ಕೇಂದ್ರ ಸ್ಥಾನವನ್ನು ಬಿಡತಕ್ಕದ್ದಲ್ಲವೆಂದು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಕೆ. ತೆಗ್ಗಿನಮನಿ**

ಪಿ.ಆರ್. 542 ಸರ್ಕಾರದ ಅಧೀನ ಕಾರ್ಯದರ್ಶಿ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.

## ನಗರಾಭಿವೃದ್ಧಿ ಸಚಿವಾಲಯ

**ವಿಷಯ:** ಶ್ರೀ ಟಿ. ಅಜ್ಜಪ್ಪ, ನಗರ ಯೋಜನಾ ಸಹಾಯಕ ನಿರ್ದೇಶಕರು (ನಿವೃತ್ತ) ಇವರಿಗೆ ಪೂರ್ವಾನ್ವಯವಾಗಿ ನಗರ ಯೋಜನಾ ಉಪ ನಿರ್ದೇಶಕರ ಹುದ್ದೆಗೆ ಮುಂಬಡ್ತಿ ನೀಡುವ ಬಗ್ಗೆ.

**ಓದಲಾಗಿದೆ:**
1. ತಿಳುವಳಿಕೆ ಪತ್ರ ಕ್ರಮಾಂಕ: ನಅಇ 72 ನಯೋಸೇ 98, ದಿನಾಂಕ: 13.6.2001.
2. ಶ್ರೀ ಟಿ. ಅಜ್ಜಪ್ಪ, ಇವರ ದಿನಾಂಕ: 2.7.2001ರ ಉತ್ತರ.
3. ಸರ್ಕಾರದ ಆದೇಶ ಸಂಖ್ಯೆ: ನಅಇ 72 ನಯೋಸೇ 98, ದಿನಾಂಕ: 31.3.2003.
4. ಪತ್ರ ಸಂಖ್ಯೆ: 21.8.2003 ಶ್ರೀ ವೈ.ಆರ್. ಸಾಹುಕಾರ್, ನಿವೃತ್ತ ಜಿಲ್ಲಾ ನ್ಯಾಯಾಧೀಶರು ಹಾಗೂ ವಿಚಾರಣಾಧಿಕಾರಿಗಳು ಇವರ ವಿಚಾರಣಾ ವರದಿ ಮತ್ತು ನಡವಳಿ.
5. ಸರ್ಕಾರದ ಆದೇಶ ಸಂಖ್ಯೆ: ನಅಇ 72 ನಯೋಸೇ 93, ದಿನಾಂಕ: 6.12.2000.
6. ಪತ್ರ ಸಂಖ್ಯೆ: ನಯೋ ಸಿ(2) 15 ಸನಿನಿ 2004, ದಿನಾಂಕ: 23.4.2004.

**ಪ್ರಸ್ತಾವನೆ:**

ಶ್ರೀ ಟಿ. ಅಜ್ಜಪ್ಪ, ನಗರ ಯೋಜನಾ ಸಹಾಯಕ ನಿರ್ದೇಶಕರು (ನಿವೃತ್ತ) ಬಳ್ಳಾರಿ ನಗರಾಭಿವೃದ್ಧಿ ಪ್ರಾಧಿಕಾರದ ಆಯುಕ್ತರಾಗಿ (ಪ್ರಭಾರ) ಹಾಗೂ ನಗರ ಯೋಜನಾ ಸದಸ್ಯರಾಗಿ ಕಾರ್ಯನಿರ್ವಹಿಸುತ್ತಿದ್ದಾಗ ರಾಯಚೂರು ನಗರಾಭಿವೃದ್ಧಿ ಪ್ರಾಧಿಕಾರಕ್ಕೆ ಹೊಂದಿಕೊಂಡಂತೆ ನಾಲ್ಕು ಅಂತಸ್ತಿನ ಕಟ್ಟಡ ಕಟ್ಟುವಾಗ ಸೆಟ್‌ಬ್ಯಾಕ್ ಮತ್ತು ಪಾರ್ಕಿಂಗ್ ಬಿಡದೆ ಕಟ್ಟಡ ನಿರ್ಮಿಸುತ್ತಿದ್ದ ಬಗ್ಗೆ ಯಾವುದೇ ಕ್ರಮ ತೆಗೆದುಕೊಳ್ಳದೆ ವಲಯ ನಿಯಮಾವಳಿಗಳನ್ನು ಉಲ್ಲಂಘನೆ ಮಾಡಿರುವುದಾಗಿಯೂ ರಾಯಚೂರು ತಾ. ಚಂದ್ರಬಂಡೆ ಪಕ್ಕದಲ್ಲಿರುವ ಸರ್ವೆ ನಂ.350 ರಲ್ಲಿ ರಸ್ತೆ, ಚರಂಡಿ, ವಿದ್ಯುತ್‌ದೀಪ ಯಾವುದೇ ಇಲ್ಲದಿದ್ದರೂ ಸಹ ನಕ್ಷೆಯನ್ನು ಅನುಮೋದನೆ ಮಾಡಲಾಗಿದ್ದು ಕರ್ತವ್ಯ ನಿಷ್ಠೆ ಇಲ್ಲದಿರುವುದನ್ನು ತೋರ್ಪಡಿಸಿ ದುರ್ನಡತೆಯನ್ನು ಎಸಗಿರುವ ಆರೋಪಕ್ಕಾಗಿ ಮೇಲೆ ಓದಲಾದ (1) ರಲ್ಲಿ ದಿನಾಂಕ: 13.6.2001ರ ನೋಟೀಸ್ ಜಾರಿ ಮಾಡಿ ಸಮಜಾಯಿಷಿ ಕೋರಲಾಗಿತ್ತು.

ಮೇಲೆ ಓದಲಾದ (2)ರ ಪತ್ರದಲ್ಲಿ ಶ್ರೀ ಟಿ. ಅಜ್ಜಪ್ಪ ಇವರು ಆಪಾದನೆಗಳನ್ನು ತಳ್ಳಿಹಾಕಿ ಆರೋಪವನ್ನು ಕೈಬಿಡುವಂತೆ ಕೋರಲಾಗಿದ್ದು ಈ ಬಗ್ಗೆ ಸತ್ಯಾಸತ್ಯತೆಯನ್ನು ಅರಿಯಲು ವಿಚಾರಣೆ ನಡೆಸುವುದು ಅವಶ್ಯವೆಂದು ತೀರ್ಮಾನಿಸಲಾಯಿತು.

ಮೇಲೆ ಓದಲಾದ (3)ರ ಸರ್ಕಾರಿ ಆದೇಶದಲ್ಲಿ ಶ್ರೀ ಟಿ. ಅಜ್ಜಪ್ಪ, ನಗರ ಯೋಜನಾ ಸಹಾಯಕ ನಿರ್ದೇಶಕರು (ನಿವೃತ್ತ) ಬಳ್ಳಾರಿ ಇವರ ವಿರುದ್ಧ ಮಾಡಿರುವ ಆರೋಪಗಳ ಬಗ್ಗೆ ವಿಚಾರಣೆಯನ್ನು ಜರುಗಿಸಿ ಸರ್ಕಾರಕ್ಕೆ ವರದಿ ಸಲ್ಲಿಸುವಂತೆ ಶ್ರೀ ವೈ.ಆರ್. ಸಾವಕಾರ್, ನಿವೃತ್ತ ಜಿಲ್ಲಾ ನ್ಯಾಯಾಧೀಶರು, ಇವರನ್ನು ನೇಮಿಸಲಾಗಿತ್ತು.

ಮೇಲೆ ಓದಲಾದ (4)ರ ಪತ್ರದಲ್ಲಿ ಶ್ರೀ ವೈ.ಆರ್. ಸಾವಕಾರ್, ನಿವೃತ್ತ ಜಿಲ್ಲಾ ನ್ಯಾಯಾಧೀಶರು ಇವರು ಶ್ರೀ ಟಿ. ಅಜ್ಜಪ್ಪ ಇವರ ಮೇಲೆ ಹೊರಿಸಲಾದ ಆರೋಪವು ರುಜುವಾತಾಗಿರುವುದಿಲ್ಲವೆಂಬ ಅಭಿಪ್ರಾಯದೊಂದಿಗೆ ವಿಚಾರಣಾ ವರದಿಯನ್ನು ಸಲ್ಲಿಸಿರುತ್ತಾರೆ.

ಮೇಲೆ ಓದಲಾದ (5)ರ ಸರ್ಕಾರಿ ಆದೇಶದಲ್ಲಿ ವಿಚಾರಣಾ ವರದಿಯನ್ನು ಪರಿಶೀಲಿಸಿ, ಸರ್ಕಾರವು ಶ್ರೀ ಟಿ. ಅಜ್ಜಪ್ಪ, ನಗರ ಯೋಜನಾ ಸಹಾಯಕ ನಿರ್ದೇಶಕರು (ನಿವೃತ್ತ) ಇವರ ಮೇಲೆ ಮಾಡಲಾದ ಆರೋಪಗಳಿಂದ ದೋಷಮುಕ್ತರನ್ನಾಗಿ ಮಾಡಲಾಗಿದೆ.

ಮೇಲೆ ಓದಲಾದ (6)ರ ಪತ್ರದಲ್ಲಿ ನಗರ ಯೋಜನಾ ನಿರ್ದೇಶಕರು ಶ್ರೀ ಟಿ. ಅಜ್ಜಪ್ಪ, ಇವರ ಮೇಲಿನ ಆರೋಪಗಳಿಂದ ದೋಷಮುಕ್ತರನ್ನಾಗಿ ಮಾಡಲಾಗಿದ್ದು ಇವರಿಗೆ ಜ್ಯೇಷ್ಟತೆಯಲ್ಲಿ ಇವರಿಗಿಂತ ಕಿರಿಯರಾದ ಶ್ರೀ ಐಜಾಜ್ ಅಹಮದ್ ಇವರಿಗೆ ಮುಂಬಡ್ತಿ ನೀಡಿದ ದಿನಾಂಕ: 18.12.2002 ರಿಂದ ಪೂರ್ವಾನ್ವಯವಾಗಿ ಬಡ್ತಿ ನೀಡಲು ಹಾಗೂ ಈ ವಿಚಾರಣೆ ನಡೆಯದಿದ್ದಲ್ಲಿ ಅವರುಗಳು ಯಾವ ಸೌಲಭ್ಯಗಳನ್ನು ಪಡೆಯುತ್ತಿದ್ದರೋ ಅವುಗಳನ್ನು ಪಡೆಯಲು ಈ ಬಗ್ಗೆ ಸೂಕ್ತ ಆದೇಶವನ್ನು ಹೊರಡಿಸುವಂತೆ ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ನಅಇ 156 ನಯೋಸೇ 2004, ಬೆಂಗಳೂರು, ದಿನಾಂಕ: 8ನೇ ಏಪ್ರಿಲ್ 2005**

ಶ್ರೀ ಟಿ. ಅಜ್ಜಪ್ಪ, ನಗರ ಯೋಜನಾ ಸಹಾಯಕ ನಿರ್ದೇಶಕರು (ನಿವೃತ್ತ) ಇವರಿಗೆ ದಿನಾಂಕ: 18.12.2002 ರಿಂದ ಉಪ ನಿರ್ದೇಶಕರ ಹುದ್ದೆಗೆ (ವೇತನ ಶ್ರೇಣಿ ರೂ.9580-14200) ಪೂರ್ವಾನ್ವಯವಾಗಿ ಕರ್ನಾಟಕ ನಾಗರೀಕ ಸೇವಾ ನಿಯಮ (ಬಡ್ತಿ, ವೇತನ ಮತ್ತು ಪಿಂಚಣಿ ಕ್ರಮಬದ್ಧತೆ ನಿಯಮಗಳು) 1978ರ ನಿಯಮ (2) (1) (ಎ) ರನ್ವಯ ಸ್ಥಾನಪನ್ನ ಮುಂಬಡ್ತಿಯನ್ನು ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಟಿ. ರಂಗನಾಥ್**

ಪಿ.ಆರ್. 544 ಸರ್ಕಾರದ ಅಧೀನ ಕಾರ್ಯದರ್ಶಿ, ನಗರಾಭಿವೃದ್ಧಿ ಇಲಾಖೆ.

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ:** ಸ್ನಾತಕೋತ್ತರ ವಿದ್ಯಾರ್ಥಿಗಳ ಮತ್ತು ಕಂಪಲ್ಸರಿ ರೊಟೇಟಿಂಗ್ ಇಂಟರ್ನಿಸ್‌ಗಳ ಸ್ಟೈಫಂಡ್ ಹೆಚ್ಚಳ.

**ಓದಲಾಗಿದೆ:** 1. ದಿನಾಂಕ: 19.04.2002 ಸಂಖ್ಯೆ: ಆಕುಕ 464 ಎಂಎಸ್‌ಎಫ್ 99ರ ಸರ್ಕಾರಿ ಆದೇಶ.

2. ದಿನಾಂಕ: 06.11.2004 ಸಂಖ್ಯೆ: ಬಿಜಿಟಿ:ಎಂ೪:7:04-05ರ ವೈದ್ಯಕೀಯ ಶಿಕ್ಷಣ ನಿರ್ದೇಶಕರ ಪತ್ರ.

**ಪೀಠಿಕೆ:**

1. ದಿನಾಂಕ: 19.04.2002ರ ಸರ್ಕಾರಿ ಆದೇಶದಲ್ಲಿ, ಸರ್ಕಾರಿ ವೈದ್ಯಕೀಯ ಕಾಲೇಜುಗಳಲ್ಲಿ ಹಾಗೂ ಸರ್ಕಾರಿ ದಂತ ಕಾಲೇಜಿನಲ್ಲಿ ಮತ್ತು ಸರ್ಕಾರದ ಆಯ್ಕೆ ಸಮಿತಿಯಿಂದ ಖಾಸಗಿ ವೈದ್ಯಕೀಯ : ದಂತ ಕಾಲೇಜಿನಲ್ಲಿನ ಸರ್ಕಾರದ ಸೀಟುಗಳಿಗೆ ಆಯ್ಕೆಯಾಗಿ ಸರ್ಕಾರಿ ಆಸ್ಪತ್ರೆಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ಕಂಪಲ್ಸರಿ ರೊಟೇಟಿಂಗ್ ಇಂಟರ್ನೀಸ್ ಮತ್ತು ಸ್ನಾತಕೋತ್ತರ ವಿದ್ಯಾರ್ಥಿಗಳಿಗೆ ಈ ಕೆಳಗಿನಂತೆ ಸ್ಟೈಫಂಡ್‌ನ್ನು ನಿಗದಿಪಡಿಸಿತ್ತು.

| | | ಸ್ಟೈಫಂಡ್ ರೂ. |
|---|---|---|
| (ಅ) | ಕಂಪಲ್ಸರಿ ರೊಟೇಟಿಂಗ್ ಇಂಟರ್ನೀಸ್ | 3,600.00 |
| (ಆ) | **ಸ್ನಾತಕೋತ್ತರ ವಿದ್ಯಾರ್ಥಿಗಳಿಗೆ** | |
| | (i) ಮೊದಲನೆಯ ವರ್ಷದ ವಿದ್ಯಾರ್ಥಿಗಳಿಗೆ | 5,720.00 |
| | (ii) ಎರಡನೆಯ ವರ್ಷದ ವಿದ್ಯಾರ್ಥಿಗಳಿಗೆ | 5,995.00 |
| | ಮೂರನೇ ವರ್ಷಕ್ಕೆ | 6,270.00 |
| (ಇ) | **ಡಿಪ್ಲೊಮೋ ಸ್ನಾತಕೋತ್ತರ ವಿದ್ಯಾರ್ಥಿಗಳಿಗೆ** | |
| | (i) ಮೊದಲನೆಯ ವರ್ಷದ ವಿದ್ಯಾರ್ಥಿಗಳಿಗೆ | 5,720.00 |
| | (ii) ಎರಡನೆಯ ವರ್ಷಕ್ಕೆ | 5,995.00 |

2. ವೈದ್ಯಕೀಯ ಕಾಲೇಜುಗಳು ಮತ್ತು ದಂತ ಮಹಾವಿದ್ಯಾಲಯದಲ್ಲಿ ಆಯ್ಕೆ ಸಮಿತಿಯಿಂದ ಸರ್ಕಾರದ ಉಚಿತ ಸೀಟುಗಳಿಗೆ ಆಯ್ಕೆಯಾಗಿ ಅಧ್ಯಯನ ನಡೆಸುತ್ತಿರುವ ಸ್ನಾತಕೋತ್ತರ ವಿದ್ಯಾರ್ಥಿಗಳಿಗೆ ಮತ್ತು ಕಂಪಲ್ಸರಿ ರೊಟೇಟಿಂಗ್ ಇಂಟರ್‌ನ್ನೀಸ್ ಸ್ಟೈಫಂಡ್‌ನ್ನು ಶೇಕಡಾ 10 ರಷ್ಟು ಹೆಚ್ಚುವರಿ ಮಾಡಿ ಪರಿಷ್ಕರಿಸಲು ವೈದ್ಯಕೀಯ ಶಿಕ್ಷಣ ನಿರ್ದೇಶಕರು ಸರ್ಕಾರಕ್ಕೆ ಪ್ರಸ್ತಾವನೆಯನ್ನು ಕಳುಹಿಸಿದ್ದಾರೆ. ಅದನ್ನು ಆರ್ಥಿಕ ಇಲಾಖೆಯ ಸಮಾಲೋಚನೆಯೊಂದಿಗೆ ಪರಿಶೀಲಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಆಕುಕ 315 ಎಂಎಸ್‌ಎಫ್ 2004, ಬೆಂಗಳೂರು, ದಿನಾಂಕ: 29ನೇ ಮಾರ್ಚ್ 2005**

3. ಸರ್ಕಾರಿ ವೈದ್ಯಕೀಯ ಕಾಲೇಜುಗಳಲ್ಲಿ ಹಾಗೂ ಸರ್ಕಾರಿ ದಂತ ಕಾಲೇಜುಗಳಲ್ಲಿ ಮತ್ತು ಸರ್ಕಾರದ ಆಯ್ಕೆ ಸಮಿತಿಯಿಂದ ಖಾಸಗಿ ವೈದ್ಯಕೀಯ : ದಂತ ಕಾಲೇಜುಗಳಲ್ಲಿನ ಸರ್ಕಾರದ ಸೀಟುಗಳಿಗೆ ಆಯ್ಕೆಯಾಗಿ ಸರ್ಕಾರಿ ಆಸ್ಪತ್ರೆಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ಕಂಪಲ್ಸರಿ ರೊಟೇಟಿಂಗ್ ಇಂಟರ್ನೀಸ್ ಮತ್ತು ಸ್ನಾತಕೋತ್ತರ ವಿದ್ಯಾರ್ಥಿಗಳಿಗೆ ಸ್ಟೈಫಂಡ್‌ನ್ನು ದಿನಾಂಕ: 01.04.2005 ರಿಂದ ಜಾರಿಗೆ ಬರುವಂತೆ ಶೇಕಡಾ 10 ರಷ್ಟು ಹೆಚ್ಚಿಸಿ ಪರಿಷ್ಕರಿಸಲಾಗಿದೆ.

4. ಸದರಿ ಸ್ಟೈಫಂಡ್‌ನ್ನು ಸ್ನಾತಕೋತ್ತರ ವಿದ್ಯಾರ್ಥಿಗಳಿಗೆ ಮತ್ತು ಇಂಟರ್ನೀಸ್‌ಗಳಿಗೆ ಮಾಸಿಕವಾಗಿ ಬಟವಾಡೆ ಮಾಡುವುದರಲ್ಲಿ ಯಾವುದೇ ವಿಳಂಬವಾಗದಂತೆ ಖಚಿತಪಡಿಸಿಕೊಳ್ಳಬೇಕು. ಸಂಬಳದ ಬಿಲ್ಲನ್ನು ಡ್ರಾ ಮಾಡುವಂತೆಯೇ ಅವುಗಳನ್ನು ಡ್ರಾ ಮಾಡಿ ವಿಭಾಗೀಯ ಮುಖ್ಯಸ್ಥರುಗಳಿಂದ ಹಾಜರಿ ಪ್ರಮಾಣಪತ್ರ ಪಡೆದು ಅದನ್ನು ಬಟವಾಡೆ ಮಾಡತಕ್ಕದ್ದು.

5. ದಿನಾಂಕ: 04.02.2005 ಸಂಖ್ಯೆ: ಆ೪ 1945 ವೆಚ್ಚ-(5):2004ರ ಅನಧಿಕೃತ ಟಿಪ್ಪಣಿಯಲ್ಲಿ ಆರ್ಥಿಕ ಇಲಾಖೆಯ ಸಹಮತಿ ಪಡೆದು ಈ ಆದೇಶವನ್ನು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್. ನಾಗರಾಜು**

ಸರ್ಕಾರದ ಅಧೀನ ಕಾರ್ಯದರ್ಶಿ,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ (ವೈದ್ಯಕೀಯ ಶಿಕ್ಷಣ).

ಪಿ.ಆರ್. 543

## ಕೃಷಿ ಮತ್ತು ತೋಟಗಾರಿಕೆ ಸಚಿವಾಲಯ

**ತಿದ್ದುಪಡಿ ಸಂಖ್ಯೆ: ಕೃತೋ೪ 240 ಕೃಉ೪ 2004, ಬೆಂಗಳೂರು, ದಿನಾಂಕ: 8/12ನೇ ಏಪ್ರಿಲ್ 2005**

**ವಿಷಯ:** ಕರ್ನಾಟಕ ಕೃಷಿ ಬೆಲೆ ಆಯೋಗವನ್ನು ಪುನರ್ ರಚಿಸುವ ಬಗ್ಗೆ.

**ಉಲ್ಲೇಖ:** ಸರ್ಕಾರಿ ಆದೇಶ ಸಂಖ್ಯೆ: ಕೃತೋ೪ 240 ಕೃಉ೪ 2004, ದಿನಾಂಕ: 15.01.2005.

ಉಲ್ಲೇಖಿತ ಸರ್ಕಾರಿ ಆದೇಶದ ಭಾಗದಲ್ಲಿರುವ ರಾಜ್ಯದಲ್ಲಿ **ಕೃಷಿ ಉತ್ಪನ್ನಗಳ ಬೆಲೆ ಆಯೋಗ** ಎನ್ನುವುದನ್ನು **ಕೃಷಿ ಬೆಲೆ ಆಯೋಗ** ಎಂದು ತಿದ್ದಿ ಓದಿಕೊಳ್ಳತಕ್ಕದ್ದು. ಇದೇ ರೀತಿ ಸದರಿ ಸರ್ಕಾರಿ ಆದೇಶದ ಭಾಗದ ಕ್ರಮ ಸಂಖ್ಯೆ (5)ನ್ನು ಕೆಳಕಂಡಂತೆ ತಿದ್ದಿ ಓದಿಕೊಳ್ಳತಕ್ಕದ್ದು.

| | | |
|---|---|---|
| 5 | ಅಪರ ಕೃಷಿ ನಿರ್ದೇಶಕರು (ಮಾನವ ಸಂಪನ್ಮೂಲ ಅಭಿವೃದ್ಧಿ) ಹಾಗೂ ಪದನಿಮಿತ್ತ ಸದಸ್ಯ ಕಾರ್ಯದರ್ಶಿ, ಕೃಷಿ ಬೆಲೆ ಆಯೋಗ, ಕೃಷಿ ಆಯುಕ್ತರ ಕಾರ್ಯಾಲಯ, ಬೆಂಗಳೂರು. | ಪದನಿಮಿತ್ತ ಸದಸ್ಯ ಕಾರ್ಯದರ್ಶಿ |

ಮೇಲ್ಕಂಡ ತಿದ್ದುಪಡಿ ಜೊತೆಗೆ ಈ ಕೆಳಕಂಡವುಗಳನ್ನು ಸದರಿ ಆದೇಶದಲ್ಲಿ ಜೋಡಿಸಲಾಗಿದೆಯೆಂದು ಓದಿಕೊಳ್ಳತಕ್ಕದ್ದು.

ಅ. ಕರ್ನಾಟಕ ಕೃಷಿ ಬೆಲೆ ಆಯೋಗಕ್ಕೆ ತಗಲುವ ವೆಚ್ಚವನ್ನು 2401-00-800-1-40-059 (ಯೋಜನೆ) ಲೆಕ್ಕ ಶೀರ್ಷಿಕೆಯಡಿ 2005-06ನೇ ಸಾಲಿಗಾಗಿ ಕೃಷಿ ಇಲಾಖೆಗೆ ಒದಗಿಸಲಾಗಿರುವ ಅನುದಾನದಲ್ಲಿ ಭರಿಸತಕ್ಕದ್ದು. ಹಾಗೂ ಆಯೋಗಕ್ಕೆ ತಗಲುವ ವೆಚ್ಚವನ್ನು ಖಜಾನೆಯಿಂದ ಯಾವ ರೀತಿ ನಗದೀಕರಣ ಮಾಡಬೇಕು ಎಂಬ ಬಗ್ಗೆ ಕೃಷಿ ಆಯುಕ್ತರು ಪರಿಶೀಲಿಸಿ ಅಗತ್ಯ ಕ್ರಮ ಕೈಗೊಳ್ಳತಕ್ಕದ್ದು.

ಆ. ಕರ್ನಾಟಕ ಕೃಷಿ ಬೆಲೆ ಆಯೋಗದ ಸದಸ್ಯರಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳಲ್ಲಿ ಅಧಿಕಾರೇತರ ಸದಸ್ಯರುಗಳಿಗೆ ನೀಡಲು ಸೂಚಿಸಲಾಗಿರುವ ಪ್ರಕಾರ ಪ್ರವಾಸ ಭತ್ಯೆ, ದಿನಭತ್ಯೆ, Sitting Fee ಇವೇ ಮುಂತಾದುವುಗಳನ್ನು ನೀಡತಕ್ಕದ್ದು.

ಈ. ಆಯೋಗದ ದೈನಂದಿನ ಕರ್ತವ್ಯ ನಿರ್ವಹಣೆ ಸಲುವಾಗಿ ಆಯೋಗಕ್ಕೆ ಬೇಕಾಗಿರುವ ಎಲ್ಲಾ ಸವಲತ್ತುಗಳನ್ನು ಕೃಷಿ ಆಯುಕ್ತರು ನೀಡತಕ್ಕದ್ದು.

ಸದರಿ ಆಯೋಗದ ಅವಧಿ ಹಾಗೂ ಆಯೋಗದ ಅಧ್ಯಕ್ಷರ ಸ್ಥಾನಮಾನ ಇವೇ ಮೊದಲಾದುವುಗಳ ಬಗ್ಗೆ ಪ್ರತ್ಯೇಕ ಆದೇಶವನ್ನು ಹೊರಡಿಸಲಾಗುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ವಿ. ಕುಮಾರ್**

ಪಿ.ಆರ್. 545 ಸರ್ಕಾರದ ಅಧೀನ ಕಾರ್ಯದರ್ಶಿ, ಕೃಷಿ ಮತ್ತು ತೋಟಗಾರಿಕೆ ಇಲಾಖೆ.

## ಶಿಕ್ಷಣ ಸಚಿವಾಲಯ

**ವಿಷಯ:** ಶ್ರೀ ರಾಘವೇಂದ್ರ ಎಲ್. ಅಳವಂಡಿ, ಭೌತಶಾಸ್ತ್ರ ಹಿರಿಯ ಶ್ರೇಣಿ ಉಪನ್ಯಾಸಕರು, ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಬೀದರ್ - ಇವರ ಹೆಸರು ಬದಲಾವಣೆ ಬಗ್ಗೆ ಆದೇಶ.

**ಓದಲಾಗಿದೆ:** 1. ಕಾಲೇಜು ಶಿಕ್ಷಣ ಆಯುಕ್ತರ ಪತ್ರ ಸಂಖ್ಯೆ: ಕಾಶಿಇ/24/ಹೆಬ/2004-05/ಸಿವಿ-2, ದಿನಾಂಕ: 24.01.2005.

**ಪ್ರಸ್ತಾವನೆ:**

ಮೇಲೆ ಓದಲಾದ ಕಾಲೇಜು ಶಿಕ್ಷಣ ಆಯುಕ್ತರ ದಿನಾಂಕ: 24.01.2005ರ ಪತ್ರದಲ್ಲಿ ಶ್ರೀ ರಾಘವೇಂದ್ರ ಎಲ್. ಅಳವಂಡಿ, ಭೌತಶಾಸ್ತ್ರ ಹಿರಿಯ ಶ್ರೇಣಿ ಉಪನ್ಯಾಸಕರು, ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಬೀದರ್ ಇವರ ಹೆಸರು ಎಸ್.ಎಸ್.ಎಲ್.ಸಿ. ಅಂಕಪಟ್ಟಿಯಲ್ಲಿ ರಾಘವೇಂದ್ರ ಬಿನ್ ಲಕ್ಷ್ಮಣರಾವ್ ಎಂದು, ನೇಮಕಾತಿ ಆದೇಶ ಮತ್ತು ಸೇವಾ ಪುಸ್ತಕದಲ್ಲಿ ಎಲ್. ಅಳವಂಡಿ ರಾಘವೇಂದ್ರ ಎಂದು, ಸೇವಾ ಪೂರ್ವ ಅವಧಿ ಘೋಷಣೆಯ ಅಧಿಸೂಚನೆಯಲ್ಲಿ ರಾಘವೇಂದ್ರ ಅಳವಂಡಿ ಎಂದು ಹಾಗೂ ದಿನಾಂಕ: 12.05.2003ರ ಸ್ಥಾನೀಕರಣ ನೀಡಲಾದ ಅಧಿಸೂಚನೆಯಲ್ಲಿ ರಾಘವೇಂದ್ರ ಎಲ್. ಅಳವಂಡಿ ಎಂಬುದಾಗಿ ನಮೂದಾಗಿರುತ್ತದೆ ಎಂದು ತಿಳಿಸುತ್ತಾ, ಈ ರೀತಿ ವಿವಿಧ ರೀತಿಯಲ್ಲಿ ಹೆಸರು ನಮೂದಾಗಿರುವುದರಿಂದ, ಸದರಿಯವರ ಹೆಸರನ್ನು ಬದಲಿಸಿ ಕರ್ನಾಟಕ ರಾಜ್ಯ ಪತ್ರದಲ್ಲಿ ಅಧಿಸೂಚನೆ ಹೊರಡಿಸುವಂತೆ ಕೋರಿದ್ದಾರೆ. ಹಾಗೂ ಇದಕ್ಕೆ ಸಂಬಂಧಿಸಿದ ದಾಖಲೆಗಳನ್ನು ಒದಗಿಸಿದ್ದಾರೆ. ಸರ್ಕಾರವು ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿದೆ ಮತ್ತು ಈ ಕೆಳಕಂಡಂತೆ ಆದೇಶಿಸಲು ನಿರ್ಣಯಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ 23 ಡಿಸಿಇ 2005, ಬೆಂಗಳೂರು, ದಿನಾಂಕ: 6ನೇ ಏಪ್ರಿಲ್ 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನಲೆಯಲ್ಲಿ ವಿವಿಧ ರೀತಿಯಲ್ಲಿ ನಮೂದಾಗಿರುವ ಶ್ರೀ ರಾಘವೇಂದ್ರ ಎಲ್. ಅಳವಂಡಿ, ಭೌತಶಾಸ್ತ್ರ ಹಿರಿಯ ಶ್ರೇಣಿ ಉಪನ್ಯಾಸಕರು, ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಬೀದರ್ ಇವರ ಹೆಸರನ್ನು "ರಾಘವೇಂದ್ರ ಎಲ್. ಅಳವಂಡಿ" ಎಂಬುದಾಗಿ ಅಧಿಕೃತವಾಗಿ ಬದಲಾಯಿಸಿಕೊಳ್ಳಲು ಸರ್ಕಾರವು ಅನುಮತಿ ನೀಡಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಮೇರಿ ಜಾಯ್ಸ್**

ಪಿ.ಆರ್. 546 ಸರ್ಕಾರದ ಉಪ ಕಾರ್ಯದರ್ಶಿ, ಶಿಕ್ಷಣ ಇಲಾಖೆ (ಉನ್ನತ ಶಿಕ್ಷಣ).

**ವಿಷಯ:** ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿಯನ್ನು ಪುನರ್ ರಚಿಸುವ ಬಗ್ಗೆ.

**ಓದಲಾಗಿದೆ:** 1. ದಿನಾಂಕ: 04.04.2002ರ ಸರ್ಕಾರದ ಆದೇಶ ಸಂಖ್ಯೆ: ಇಡಿ 08 ಎಸ್ಎಕ್ಸ್ಎಂ 02.

2. ಏಕ ಕಡತ ಪದ್ಧತಿಯಡಿ ಸ್ವೀಕೃತವಾದ ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿ, ಬೆಂಗಳೂರು ರ ಕಡತದ ಸಂಖ್ಯೆ:ಆ8-345-ಪ.ಮಂ.ಪ್ರ-5/2004-05.

**ಪ್ರಸ್ತಾವನೆ:**

1. ಮೇಲೆ ಓದಲಾದ (2) ರಲ್ಲಿನ ಕಡತದ ಕಂಡಿಕೆ 16 ರಲ್ಲಿ ನಿರ್ದೇಶಕರು, ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿ, ಇವರು ತಮ್ಮ ಅಭಿಪ್ರಾಯವನ್ನು ನೀಡಿ ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿಯ ಅಧಿನಿಯಮ 1966ರ ಸೆಕ್ಷನ್ 4 ರನ್ವಯ ಮಂಡಳಿಯ ಪುನರ್ ರಚನೆ ಬಗ್ಗೆ ಪ್ರಸ್ತಾಪಿಸಿರುತ್ತಾರೆ. ಈ ಪ್ರಸ್ತಾವನೆಗೆ ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು ಇವರು ಮೇಲೆ ಓದಲಾದ (2) ರಲ್ಲಿನ ಕಡತದಲ್ಲಿನ ಕಂಡಿಕೆ 18 ರಲ್ಲಿ ಅವರ ಸಹಮತಿ ವ್ಯಕ್ತಪಡಿಸಿದ್ದಾರೆ.

2. ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ ಹಾಗೂ ಅಧ್ಯಕ್ಷರು, ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿ, ಮಲ್ಲೇಶ್ವರಂ, ಬೆಂಗಳೂರು ಇವರ ಸದರಿ ಪ್ರಸ್ತಾವನೆಯನ್ನು ಸರ್ಕಾರ ಪರಿಗಣಿಸಿ, ಈ ಕೆಳಕಂಡ ಆದೇಶವನ್ನು ಈ ಮೂಲಕ ಹೊರಡಿಸಲು ನಿರ್ಣಯಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ 04 ಎಸ್ಎಕ್ಸ್ಎಂ 2005, ಬೆಂಗಳೂರು, ದಿನಾಂಕ: 6ನೇ ಏಪ್ರಿಲ್ 2005**

3. ಈ ಕೆಳಕಂಡ ಸದಸ್ಯರನ್ನೊಳಗೊಂಡಂತೆ ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿಯನ್ನು ಪುನರ್ ರಚಿಸಲು ಸರ್ಕಾರ ಈ ಮೂಲಕ ಆದೇಶಿಸಿದೆ.

| | | |
|---|---|---|
| 1 | ಅಧ್ಯಕ್ಷರು | ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು. |
| 2 | ಮಂಡಳಿಯ ಕಾರ್ಯಕಾರಿ ಉಪಾಧ್ಯಕ್ಷರು | ನಿರ್ದೇಶಕರು (ಪರೀಕ್ಷೆಗಳು) ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿ, ಮಲ್ಲೇಶ್ವರಂ, ಬೆಂಗಳೂರು. |
| 3 | ಉಪಾಧ್ಯಕ್ಷರು | ಸಹ ನಿರ್ದೇಶಕರು (ಶಾಲಾ ಶಿಕ್ಷಣ) ಸಾರ್ವಜನಿಕ ಶಿಕ್ಷಣ ಇಲಾಖೆ, ಆಯುಕ್ತರ ಕಛೇರಿ, ಬೆಂಗಳೂರು. |
| ಸದಸ್ಯರು: | | |
| 1 | ಸಾರ್ವಜನಿಕ ಶಿಕ್ಷಣ ಇಲಾಖೆಯ ಒಬ್ಬ ಉಪ ನಿರ್ದೇಶಕರು | ಶ್ರೀ ಹಫೀಜುಲ್ಲಾ ಷರೀಫ್, ಉಪ ನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ, ಧಾರವಾಡ. |
| 2 | ನಿರ್ದೇಶಕರುಗಳು: | |
| | ಅ) ಪದವಿ ಪೂರ್ವ ಶಿಕ್ಷಣ | |

| | | |
|---|---|---|
| | ಅ) ವೃತ್ತಿ ಶಿಕ್ಷಣ | |
| | ಇ) ಆಯುಕ್ತರು/ಅಪರ ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಗುಲ್ಬರ್ಗ | |
| | ಈ) ತಾಂತ್ರಿಕ ಶಿಕ್ಷಣ | |
| | ಉ) ಆಯುಕ್ತರು/ಅಪರ ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಧಾರವಾಡ. | |
| 3. | ವಿಶ್ವವಿದ್ಯಾನಿಲಯಗಳನ್ನು ಪ್ರತಿನಿಧಿಸುವ 4 ಪ್ರಾಧ್ಯಾಪಕರು | 1) ಡಾ. ಲಲಿತಮ್ಮ, ಮೈಸೂರು ವಿಶ್ವವಿದ್ಯಾನಿಲಯ<br>2) ಡಾ. ತಳವಾರ್, ಬೆಂಗಳೂರು ವಿಶ್ವವಿದ್ಯಾನಿಲಯ<br>3) ಡಾ. ಕಾಶೀನಾಥ್, ಕರ್ನಾಟಕ ವಿಶ್ವವಿದ್ಯಾನಿಲಯ<br>4) ಡಾ. ಶಾಂತವೀರಪ್ಪ, ಕುವೆಂಪು ವಿಶ್ವವಿದ್ಯಾನಿಲಯ |
| 4. | ನಿರ್ದೇಶಕರು | ಡಿ.ಎಸ್.ಇ.ಆರ್.ಟಿ, ಬೆಂಗಳೂರು. |
| | ಎ) ಪ್ರೌಢಶಾಲೆಗಳನ್ನು ಪ್ರತಿನಿಧಿಸುವವರು | |
| | ಬಿ) ಪ್ರೌಢಶಾಲಾ ಮುಖ್ಯಸ್ಥರು (ಇಬ್ಬರು) | 1) ಶ್ರೀ ಚಂದ್ರೇಗೌಡ, ಮುಖ್ಯ ಶಿಕ್ಷಕರು ವಿದ್ಯಾರಣ್ಯ ಪ್ರೌಢಶಾಲೆ, ತುರುವೇಕೆರೆ, ತುಮಕೂರು ಜಿಲ್ಲೆ. |
| | | 2) ಶ್ರೀ ಪ್ರಕಾಶ್ ನಾಯಕ್, ಮುಖ್ಯೋಪಾಧ್ಯಾಯರು, ಕಾರವಾರ. |
| | ಸಹ ಶಿಕ್ಷಕರು | 1) ಶ್ರೀ ಮಸೂದ್ ಅಬ್ದುಲ್ ಖಾಲಿಕ್, ಸ.ಶಿ., ಸರ್ಕಾರಿ ಉರ್ದು ಪ್ರೌಢಶಾಲೆ, ಲಾಲ್‌ಗಿರಿ, ಗುಲ್ಬರ್ಗಾ (ಗುಲ್ಬರ್ಗ ವಿಭಾಗ). |
| | | 2) ಶ್ರೀ ಅಶೋಕ್ ಕಾಮತ್, ಮುಖ್ಯ ಶಿಕ್ಷಕರು, ಸರ್ಕಾರಿ ಪ್ರೌಢಶಾಲೆ, ವಳಕಾಡು, ಉಡುಪಿ (ಮೈಸೂರು ವಿಭಾಗ) |
| | ಸಿ) ಬಿ.ಇಡಿ ಕಾಲೇಜಿನ ಪ್ರಾಂಶುಪಾಲರು | 1) ಶ್ರೀ ನರಸಿಂಹಮೂರ್ತಿ, ಪ್ರಾಂಶುಪಾಲರು, ಟ್ಯಾಗೋರ್ ಸ್ಮಾರಕ ಬಿ.ಇಡಿ ಕಾಲೇಜು, ರಾಯಚೂರು. |
| | ಡಿ) ಶಿಕ್ಷಣ ತಜ್ಞರು | 1) ಡಾ. ಶಿವಾನಂದ ನಿವೃತ್ತ ಇಲಾಖಾ ಮುಖ್ಯಸ್ಥರು, ಬೆಂಗಳೂರು ವಿಶ್ವವಿದ್ಯಾನಿಲಯ, ಬೆಂಗಳೂರು. |
| | | 2) ಶ್ರೀ ಸಂಪಂಗಿ, ನಿವೃತ್ತ ನಿರ್ದೇಶಕರು, ಬೆಂಗಳೂರು. |
| | | 3) ಶ್ರೀ ಎಂ.ಎಲ್. ದಖನಿ, ನಿವೃತ್ತ ಪ್ರಾಂಶುಪಾಲರು, ಸರ್ಕಾರಿ ಬಿ.ಇಡಿ, ಕಾಲೇಜು, ಬೆಳಗಾಂ. |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ.ಹೆಚ್. ಪಡಸಲಗಿ**

ಪಿ.ಆರ್. 547

ಸರ್ಕಾರದ ಅಧೀನ ಕಾರ್ಯದರ್ಶಿ, ಶಿಕ್ಷಣ ಇಲಾಖೆ.

**ವಿಷಯ:** ಅಕ್ಷರ ದಾಸೋಹ ಕಾರ್ಯಕ್ರಮದ ಮೌಲ್ಯಮಾಪನ-ಸೇವಾ ವೆಚ್ಚವನ್ನು ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ: ಇಡಿ 163 ಎಂಎಂಎಸ್ 2004, ದಿನಾಂಕ: 23.11.2004.
2. ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು ಅವರ ಪತ್ರ ಸಂಖ್ಯೆ: ಎಂ3:ಅ.ದಾ:ಮೌಲ್ಯಮಾಪನ 19:03, ದಿನಾಂಕ: 1.3.2005.

**ಪ್ರಸ್ತಾವನೆ:**

ರಾಜ್ಯದಲ್ಲಿ ಜಾರಿಯಲ್ಲಿರುವ ಮಧ್ಯಾಹ್ನದ ಬಿಸಿಊಟ ಯೋಜನೆ ಅಕ್ಷರ ದಾಸೋಹ ಕಾರ್ಯಕ್ರಮದ ಮೌಲ್ಯಮಾಪನ ಕಾರ್ಯಕ್ಕಾಗಿ ಮೇಲೆ (1) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ರೂ.17.50 ಲಕ್ಷ ರೂ.ಗಳನ್ನು ಬಿಡುಗಡೆ ಮಾಡಲಾಗಿತ್ತು. ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು ಅವರು ಮೇಲೆ (2) ರಲ್ಲಿ ಓದಲಾದ ದಿನಾಂಕ: 1.3.2005ರ ತಮ್ಮ ಪತ್ರದಲ್ಲಿ ಬಿಡುಗಡೆ ಮಾಡಲಾದ ಸೇವಾ ಶುಲ್ಕವನ್ನು ಸರ್ಕಾರಕ್ಕೆ ಪಾವತಿಸಬೇಕಿರುವುದರಿಂದ ಮತ್ತೆ 1.84 ಲಕ್ಷ ರೂ. ಗಳನ್ನು ಬಿಡುಗಡೆ ಮಾಡುವಂತೆ ಕೋರಿದ್ದಾರೆ. ಈ ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ 163 ಎಂಎಂಎಸ್ 2004, ಬೆಂಗಳೂರು, ದಿನಾಂಕ: 1ನೇ ಏಪ್ರಿಲ್ 2005**

**(ಇಡಿ 03 ಸ್ವೀಮರ (ಯೂನಿಕ್) 2005, ದಿನಾಂಕ: 01.04.2005)**

ಸರ್ಕಾರವು ಅಕ್ಷರ ದಾಸೋಹ ಕಾರ್ಯಕ್ರಮದ ಮೌಲ್ಯಮಾಪನಕ್ಕಾಗಿ ವೆಚ್ಚವಾಗುವ ರೂ.17.50 ಲಕ್ಷ ರೂ.ಗಳಿಗೆ ಸೇವಾ ಶುಲ್ಕವನ್ನು ಪಾವತಿಸುವ ಸಲುವಾಗಿ ರೂ.1.84 ಲಕ್ಷಗಳನ್ನು (ಒಂದು ಲಕ್ಷ ಎಂಬತ್ತ ನಾಲ್ಕು ರೂಪಾಯಿಗಳು ಮಾತ್ರ) ಬಿಡುಗಡೆ ಮಾಡುತ್ತದೆ. ಈ ವೆಚ್ಚವನ್ನು ಅಕ್ಷರ ದಾಸೋಹ ಕಾರ್ಯಕ್ರಮಕ್ಕಾಗಿ 2004-05ನೇ ಸಾಲಿನಲ್ಲಿ ಮೀಸಲಾದ ಹಣದಲ್ಲೇ ಭರಿಸತಕ್ಕದ್ದು.

ಆಂತರಿಕ ಆರ್ಥಿಕ ಸಲಹೆಗಾರರು, ಶಿಕ್ಷಣ ಇಲಾಖೆ ಅವರ ಸಹಮತಿಯನ್ನು ಅ.ಟಿ. ಸಂಖ್ಯೆ: ಶಿಇ 270 ಐಎಫ್ (ಬಿಎ) 2005, ದಿನಾಂಕ: 22.3.2005 ರಲ್ಲಿ ಪಡೆದು ಈ ಆದೇಶವನ್ನು ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ಶ್ರೀಕಂಠೇಶ್ವರ**

ಪಿ.ಆರ್. 549

ವಿಶೇಷಾಧಿಕಾರಿ ಹಾಗೂ ಪದನಿಮಿತ್ತ,

ಸರ್ಕಾರದ ಉಪ ಕಾರ್ಯದರ್ಶಿ (ಯೋಜನೆ), ಶಿಕ್ಷಣ ಇಲಾಖೆ.

**ವಿಷಯ:** ಕೇಂದ್ರ ಆಹಾರ ತಾಂತ್ರಿಕ ಸಂಶೋಧನಾಲಯ, ಮೈಸೂರು ಈ ಸಂಸ್ಥೆಯು ನಡೆಸುವ ರಾಷ್ಟ್ರೀಯ ಪೌಷ್ಠಿಕ ಕಾಂಗ್ರೆಸ್‌ಗೆ ರೂ.5.00 ಲಕ್ಷ ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:** ನಿರ್ದೇಶಕರು, ಸಿ.ಎಫ್. ಟಿ.ಆರ್.ಐ, ಮೈಸೂರು ಇವರ ಪತ್ರ ಸಂಖ್ಯೆ: ಡಿಓ/ಎಸ್‌ವೈ ಎ.ಂಪಿ.ಇ.ಎಲ್/2004, ದಿನಾಂಕ: 21.7.2004.

**ಪ್ರಸ್ತಾವನೆ:**

ನಿರ್ದೇಶಕರು, ಕೇಂದ್ರ ಆಹಾರ ತಾಂತ್ರಿಕ ಸಂಶೋಧನಾಲಯ, ಮೈಸೂರು ಇವರು ಮೇಲೆ ಓದಲಾದ ದಿನಾಂಕ: 21.7.2004ರ ತಮ್ಮ ಪತ್ರದಲ್ಲಿ ಶಾಲಾ ಮಕ್ಕಳಿಗೆ ಪೌಷ್ಠಿಕಾಂಶದ ಆಹಾರಗಳನ್ನು ಒದಗಿಸುವ ನಿಟ್ಟಿನಲ್ಲಿ ಕಾರ್ಯೋನ್ಮುಖಿವಾಗಿದ್ದು, ಈ ಬಗ್ಗೆ ಮೈಸೂರಿನಲ್ಲಿ ರಾಷ್ಟ್ರೀಯ ಪೌಷ್ಠಿಕಾಂಶಗಳ ಅಧಿವೇಶನ ನಡೆಸುತ್ತಿದ್ದು, ಇದಕ್ಕಾಗಿ ರಾಜ್ಯ ಸರ್ಕಾರದ ಆರ್ಥಿಕ ಸಹಾಯವನ್ನು ಒದಗಿಸುವಂತೆ ಕೋರಿದ್ದಾರೆ. ಈ ಕೋರಿಕೆಯನ್ನು ಪರಿಶೀಲಿಸಿದ ಸರ್ಕಾರವು ಅದನ್ನು ಒಪ್ಪಿ ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ 118 ಎಂಎಂಎಸ್ 2005, ಬೆಂಗಳೂರು, ದಿನಾಂಕ: 28ನೇ ಮಾರ್ಚ್ 2005**

**(ಇಡಿ 137 ಸ್ವೀಮರ (ಯೂನಿಕ್) 2005, ದಿನಾಂಕ: 28.03.2005)**

ಕೇಂದ್ರ ಆಹಾರ ತಾಂತ್ರಿಕ ಸಂಶೋಧನಾಲಯವು ಭಾರತೀಯ ಪೌಷ್ಠಿಕಾಂಶಗಳ ಸಂಸ್ಥೆ ಹಾಗೂ ರಕ್ಷಣಾ ಆಹಾರ ಸಂಶೋಧನಾ ಪ್ರಯೋಗಾಲಯಗಳ ಸಹಯೋಗದೊಡನೆ ಮೈಸೂರಿನಲ್ಲಿ ನಡೆಸುವ ರಾಷ್ಟ್ರೀಯ ಪೌಷ್ಠಿಕಾಂಶಗಳ ಅಧಿವೇಶನಕ್ಕಾಗಿ ಹಾಗೂ ಸಿ.ಎಫ್.ಟಿ.ಆರ್.ಐ. ಸಲಹೆಯಂತೆ ರೂ.5.00 ಲಕ್ಷಗಳನ್ನು (ಐದು ಲಕ್ಷ ರೂಪಾಯಿಗಳು ಮಾತ್ರ) ರಾಜ್ಯ ಸರ್ಕಾರದ ವಂತಿಗೆಯಾಗಿ ಬಿಡುಗಡೆ ಮಾಡುತ್ತದೆ. ಅಕ್ಷರ ದಾಸೋಹ ಕಾರ್ಯಕ್ರಮಕ್ಕಾಗಿ ಮೀಸಲಿಟ್ಟ ರೂ.262 ಕೋಟಿಗಳ ಪೈಕಿ ಈ ಮೊತ್ತವನ್ನು ನಿರ್ದೇಶಕರು, ಕೇಂದ್ರ ಆಹಾರ ತಾಂತ್ರಿಕ ಸಂಶೋಧನಾಲಯ ಅವರಿಗೆ ಪಾವತಿಸಲು ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ ಅವರಿಗೆ ಸರ್ಕಾರದ ಅನುಮತಿ ನೀಡಿದೆ.

ಈ ವೆಚ್ಚವನ್ನು 2202-01-800-1-35-059 (ಅಕ್ಷರ ದಾಸೋಹ) ಲೆಕ್ಕಶೀರ್ಷಿಕೆಯಡಿ ಭರಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ: ಆಇ 1051/ವೆಚ್ಚ-8/2005, ದಿನಾಂಕ: 23.3.2005 ರಲ್ಲಿ ನೀಡಿದ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ಶ್ರೀಕಂಠೇಶ್ವರ**

ಪಿ.ಆರ್. 550

ವಿಶೇಷಾಧಿಕಾರಿ ಹಾಗೂ ಪದನಿಮಿತ್ತ,

ಸರ್ಕಾರದ ಉಪ ಕಾರ್ಯದರ್ಶಿ (ಯೋಜನೆ), ಶಿಕ್ಷಣ ಇಲಾಖೆ.

## AGRICULTURE & HORTICULTURE SECRETARIAT

**Sub:** Continuation of Ongoing Plan Schemes of the Horticulture Department during 2005-06.

**Ref:**
1) G.O.No. AHD 115 HPP 2004 dated .29.4.2004.
2) G.O No.ಗ್ರಾಅಪ/146/ಯೋಉಮೌ/2004 dated 16.10.2004
3) G.O No. AHD 98 HPP 2004 dated 21.12.2004.
4) G.O No. AHD 101 HPP 2004 dated 17.1.2005.
5) G.O No. AHD 297 HPP 2004 dated 19.1.2005.
6) Letter of Director of Horticulture No.ತೋಇ:ಯೋ:ಸತೋಅ.1:1:2005-06 dated 2.4.2005.
7) Proceedings of the meeting held on 5-4-2005 for continuation of Ongoing plan schemes for the year 2005-06.

**PREAMBLE**:

In the Government Order read at (1) above, 14 Ongoing Plan Schemes and 192 posts of the Horticulture Department were sanctioned to be continued during the year 2004-05. Further, three schemes namely, " Establishment of Small Farmers Agri-business Consortium Karnataka" (2401-00-001-2-07-059), "Pilot project on Adoption of Israeli Technology in Farmers field in Karnataka" (2401-00-119-206-000-051) and NOVOD Board sponsored project on "Tree Borne Oil Seeds" (2401-00-114-0-02-000-059) have been sanctioned as per the Government Orders read at (3) (4) and (5) above. Thus, the Department of Horticulture has implemented 17 plan schemes during the year 2004-05. (State sector – 13, Mission Mode-3 and Macro Mode-1)

The Director of Horticulture in his letter read at (6) above has requested the Government to sanction a total of 15 plan schemes and 192 posts during the year 2005-06 as ongoing schemes considering the fact that two schemes i.e., "Establishment of Small Farmers Agri-business Consortium Karnataka"and "Tree Borne Oil Seeds" were for the year 2004-05. As per the Government Order read at (2) above, some of the schemes of the Horticulture Department have been transferred from State Sector to Panchyat Raj Institutions for implementation of assurances with regard to devolution of powers to Panchyat Raj Institutions .Two schemes namely, "Special scheme for Drip irrigation subsidy to Horticulture crops" (2401-00-108-2-30) and "Cold storage subvention scheme"(2401-00-800-2-25) have been transferred to Panchyat Raj Institutions .Three schemes namely, Oil Palm cultivation in Potential States (75% GOI )(2401-00-108-2-18) , Integrated farming in Coconut Holdings with CDB assistance (100%CDB)(2401-00-108-2-35) and Development of Horticulture under new macro management mode

